# ನವನೀತ ರಾಮಾಯಣ

ಮುಳಿಯ ತಿಮ್ಮಪ್ಪಯ್ಯ

ಕನ್ನಡ ಸೇವಾ ಸಂಘ,

ಅಮ್ಮೆಂಬಳ.

# ಮುನ್ನುಡಿ

ನನಗೆ ಕನ್ನಡಕಕ್ಕೋಜರೆಂದರೆ ತಾಯಮ್ಮನವರು. ಎಳವೆಯಲ್ಲಿ ತೊರವೆರಾಮಾಯಣವನ್ನು, ಬುಡವಿಡಿದು ಕಡೆವರೆಗೆ ಹಾಡಿ ಕಲಿಸಿದರು. ಸ್ವಾಭಾವಿಕವಾದ ಅವರ ಇಂಚರಕ್ಕೆ, ಅದೊಂದು ವಿಶಿಷ್ಟವಾದ ಗಮಕಕಲೆ ಹೆಣೆದುಕೊಂಡಿತ್ತು. ಆಗ, ನಾನೆ ಹೊಸದೊಂದು ರಾಮಾಯಣವನ್ನು ಬರೆದು ತಾಯಮ್ಮನವರಿಗೆ ಒಪ್ಪಿಸುವೆನೆಂದು ಹರಕೆಹೊತ್ತುಕೊಂಡಿದ್ದೆನು. ಅವರು ಯಶಃಕಾಯರಾಗಿ ಹೋದರೂ ಹೊತ್ತ ಹರಕೆ ಮಸ್ತಕದೊಳಗೇ ಉಳಿದುಹೋಯಿತು. ದೇವಸ್ವರೂಪವನ್ನೊಂದಿದ ಮೇಲೇ ಹರಕೆಯೊಪ್ಪಿಸ ತಕ್ಕುದೆಂದು ವಿಧಿನಿಯಮವೊ ಏನೊ? ಇರಲಿ—ಇದು ಆ ಹರಕೆಗಬ್ಬದ ಮೊದ ಲಿನ ಭಾಗವು; ಅಥವಾ ಕಾವ್ಯಾನುಸಾರವಾಗಿ ಹೇಳುವುದಾದರೆ, ಇದು ಪ್ರಥಮ 'ಭಾಂಡ'ವು. ಇನ್ನೆರಡು 'ಭಾಂಡ'ಗಳು ಮುಂದೆ ಅಚ್ಚಾಗಲಿವೆ. ವಾಲ್ಮೀಕಿ ರಾಮಾಯಣವನ್ನಾಗಲಿ, ಇನ್ನಾವ ರಾಮಾಯಣವನ್ನಾಗಲಿ ಹಿಂಬಾಲಿಸಿ ಬರೆದುದಲ್ಲವಿದು. ಕಥಾರಚನೆ ಆದ್ಯಂತವಾಗಿ 'ನವ—ನೀತ'ವಾದುದೇ. ಆ ಅರ್ಥಾನುಗುಣವಾಗಿಯೇ ಈ ಕಾವ್ಯದ ಹೆಸರೂ ರೂಪಿತವಾಗಿದೆ. ಹೆಸರಿನಲ್ಲಿ ಹೊಳೆಯುವ ಶ್ಲೇಷಾರ್ಥದ ಸವಿ ಇದರೊಳಗಿದೆಯೋ ಇಲ್ಲವೋ ಎಂಬುದನ್ನು ನಿರ್ಧರಿಸುವ ಅಧಿಕಾರವೆಂಬುದು ನನ್ನದಲ್ಲ—ವಾಚಕಮಹನೀಯರದು.

ಈ ಪ್ರಥಮ ಭಾಂಡದಲ್ಲಿ, ಸೀತಾಲಕ್ಷ್ಮಣ ಸಮೇತನಾದ ಶ್ರೀರಾಮನು ವನವಾಸಗತನಾಗುವಲ್ಲಿ ವರೆಗಿನ ಕಥಾಭಾಗವು ಅಡಕವಾಗಿದೆ. ಮುಂದಿನವು ಗಳಲ್ಲಿ, ಹಿಂದಿರುಗಿ ಬಂದು ರಾಮನು ಪಟ್ಟಾಭಿಷಿಕ್ತನಾಗುವ—ಅಶ್ವಮೇಧಾನಂತರ ದಲ್ಲಿ ಪರಂಧಾಮವನ್ನೊಂದುವ, ಭಾಗಗಳು ಕ್ರಮವಾಗಿ ಚಿತ್ರಿತಗಳಾಗುವವು.

ಈ ಭಾಗದ ಪ್ರಕಟನವಾದರೂ, ಇಷ್ಟು ಬೇಗನೆ ಆಗಬಹುದೆಂದು ಭಾವಿಸಿರಲಿಲ್ಲ. ಮಂಗಳೂರಿಗೆ ನೆರೆಹಳ್ಳಿಯಾದ 'ಅಮ್ಮೆಂಬಳ'ದ 'ಕನ್ನಡ ಸೇವಾ ಸಂಘ'ದ ವ್ಯವಸ್ಥಾಪಕರಾದ ವಿದ್ವಾನ್ ಟಿ. ಗೋಪಾಲಕೃಷ್ಣ ಭಟ್ಟರ ಕನ್ನಡ ಭಕ್ತಿ—ಉತ್ಸಾಹಗಳೇ ಕೆಲಮಟ್ಟಿಗೆ ಈ ಪ್ರಕಟನಕ್ಕೆ ಕಾರಣ. ಈ ಯುವಕಮಿತ್ರರಿಗೆ ನಾನು ಋಣಿಯಾಗಿರುತ್ತೇನೆ; ಅವರ ಉತ್ಸಾಹ–ಶಕ್ತಿ– ಆನುಕೂಲ್ಯಗಳು ಏಳ್ಗೆಗೊಳ್ಳಲಿ.

ಮಂಗಳೂರು,
೨೭–೬–೧೯೪೦.

ಮುಳಿಯ ತಿಮ್ಮಪ್ಪಯ್ಯ.

ಕೈಲಾಸವಾಸವಡೆದ
ಹೆತ್ತಮ್ಮ
ಮೂಕಾಂಬಿಕಾಮ್ಮನವರ
ಆತ್ಮಕ್ಕೆ—

# ಹರಕೆಗಾಣಿಕೆ

ಹೊಸದಾಗಿ ಮಸೆದ ಬಡತನದುಪಟಳಕ್ಕಳುಕಿ
ಪಡಲಾರದಾ ಪಾಡುವಟ್ಟರೂ ಕಂಗೆಡದೆ
ನಡೆದೆನ್ನ ಪಡೆದಮ್ಮ ಧರ್ಮದೇವತೆಯೆ ಮನೆ
ಯಂ ಮಕ್ಕಳಂ ಬಾಳ್ಕೆಯನ್ನಿಂತುಟರಳಿಸಿದೆ.

ಪಡಿಗಾಣದಿಂಚರದ ಗಮಕದೊಡ್ಡವಣೆಯಿಂ
ಪಾಡಿ ರಾಮಾಯಣವನೂಡಿದೆ ಮಗಂಗೆ ನಿ
ನ್ನಡಿಗೆ ಹೊಸದೊಂದು ರಾಮಾಯಣಂ ಬರೆದು ಕಾ
ಣಿಕೆಯಿೂವೆನೆಂದು ಪೂಣ್ದುದನದೇಂ ಮರೆದಪೆನೆ?

ಮಾತೆ ನಿನ್ನಾತ್ಮಕೊಪ್ಪಿಸುವೆನೀ ನವನೀತ
ರಾಮಾಯಣವನು ಕನ್ನಡ ಮಾತೆ ನಲಿಗೆ ಭಾ
ರತ ಮಾತೆಯೊಲಿಗೆ ಮುಸುಕಿದ ಮುಗಿಲು ಮಳೆಯಾಗಿ
ಸುರಿಗೆ ಸರ್ವಂಸಹಾಮಾತೆಯಾನಂದಿಸುಗೆ!

# ನವನೀತ ರಾಮಾಯಣ

## ಪ್ರಥಮ ಭಾಂಡ

### ಒಂದನೆಯ ಖಂಡ

ಜಂಪೆರಗಳೆ

ಪಡುಗಡಲು ತೆರೆಗೆಯ್ಗಳಿಂದಲೆಡೆವಿಡದೆ ಪಾ
ದಂಗಳಂ ಪೂಜಿಸುತ್ತಿರಲದಂ ಕೈಕೊಂಡು
ಭದ್ರಾಸನದೊಳೆರಗುತೋಲಗಿಸಿಕೊಳ್ಳುವೀ
ಪೌರಸ್ತ್ಯಧರ್ಮಾವತಾರಿ—ಮಲಯಾಚಲನ
ಭವ್ಯಾಕೃತಿಯನಂಗವಿನ್ಯಾಸದಂದವ
ನ್ನಲ್ಲಲ್ಲಿಗನುವಾಗಿ ನೆಲೆಗೊಂಡ ಮೈಗಟ್ಟ
ನೊಡ್ಡಾರವಂ ನೋಡು—ಪುಣ್ಯಭಾಜನನಾಗು.
ಅದೊ ಗಿರೀಶ್ವರನ ಬಗೆ ತಂಗಾಳಿಯೆಂದೆನಿಸಿ
ಬೀಸುತಿದೆ; ತಳಿರ ನುಣ್ಬೆರಳುಗಳ ಸನ್ನೆಯಿಂ
ಬಗೆಬಗೆಯ ನಿಧಿಗೆ ಸನ್ನಿಧಿಯೆನಿಪ ತನ್ನಂತ
ರಂಗದಿಂ ಸೂಸುವಾ ಸಾರದ ಹೊಲಬನರಿದು
ಹೀರಲೆಂದೈತರುವ ಭಾವಕರ ಕಂಗಳಿಗೆ
ನೀಲಾಂಜನಂಬಳಿದು ನೇರಾಗಿ ಕಾಣಿಸಲು
ಪರಿಮಳವನುಕ್ಕಿಸಲು ಹರಡಿಸಲು ಹಂಪಲಗ
ಳನ್ನೊಪ್ಪಿಸಲ್ಕೆಂದು ಕೈಯೆತ್ತಿರುವ ಬಳ್ಳಿ
ಮರಗಳಂ, ಪರಿಸರದೊಳೆಡೆಗೊಂಡ ಗಿಡುಹೊದರು
ಗಳನಂತರದೊಳಿಟ್ಟು ಸಂಸಾರದೊಳವನೊಳ
ಕೊಳ್ಳಿದಂ ಕಾಡೆನುತಲವಗಣಿಸಿದರು, ಬರಿಯ
ಹೆಸರೆಲ್ಲ ಕೆಸರಾಗಿ ಕಾಲೊಂದಿ ಕಡಲೊಳಗೆ

ತೇಲುತ್ತಲಿಹುದೆಂಬುದನು ಬಗೆದು, ಮಾನಸ
ಕ್ಕೇರುತಿಳಿವಾಗಳಂದಂದಿಗಾಸರೆಯಪ್ಪ
ಭೂಧರವಿದನ್ನೊಂದಿದಾರಾಮಪಾದಂಗ
ಳೊಳಗೆಂದುಮೇರಿಳಿತವಿಲ್ಲಿದೊಂದೇ ತೆರದೊ
ಳುಕ್ಕುಡಿಸುತಿರುವ ತಿಳಿನೀರಂ ಪರಾಂಬರಿಸಿ
ಹೀರುತ್ತ, ಬಿಂದುಬಿಂದುಗಳೊಡನೆ ಚೈತನ್ಯ
ವೇರುತೆದೆವಡೆದು ಕಾವ್ಯಾತ್ಮದೊಡನೊಂದಾಗು! ೧

ಇದೊ ಸರ್‍ರೆನುತ್ತಿಲ್ಲಿ ಚಿಲುಮೆಯಲಿ ಸೀನೀರು
ನಗರಾಜನೆದೆಯಕ್ಕರೊಸರಾಗಿ ಚಿಮ್ಮುತಿದೆ!
ಬಳ್ಳಿಗಿಡುಮರಗಳಿಂ ಸೂಸುತಿಹ ಬನರಾಣಿ
ಯನುರಾಗರಸವೆನಿಪ ಮಕರಂದಸಾರವದೊ
ಸುರಿಯುತೀ ಕಾಲ್ವಿಡಿದು ಹೊನಲೆದ್ದು ಹರಿಯುತಿದೆ!
ಎಲೆ ಮನವೆ! ಸಾರದ್ವಯಂಗಳೊಳು ಮೇಲಿನದೆ
ಮೇಲೆಂಬ ಕೆಳಗಿನದೆ ಕೀಳೆಂಬ ಮಂಕು ನಿ
ನ್ನನ್ನುಳಿಯದಿರೆ ತಿಳಿವು ತೇಳಾಗಿ ಕಡಿವುದೈ!
ಸಾರಿದೆನು. ಭಾವಿಸೀ ಭೂಗರ್ಭದಿಂ ಕಾಲ
ಭೇದಕೆ ಸಿಲುಕದೊಂದೆ ತೆರನಾಗಿ ಜೀವನಂ
ತಲೆಯೆತ್ತಿ ಹರಿಯುತಿದೆ; ತಾನದರ ಕಾಲ್ಗೆರಗು
ತಲ್ಲವೇ ಮಧುವಿದೊಂದಾಗಿ ಸಾಗುತ್ತಿಹುದು?
ಈ ಜೇನೊಳಿಹುದಯ್ಯ ವಿಕೃತಿಯೋಗರವಂತು
ಟೀ ಶುದ್ಧಜಲದೊಳಿಹುದೈ ಪ್ರಕೃತಿಸಾರಮಂ
ತೆರಡನೊಡವೆರಸುತ್ತ ಸಂಸಾರಭಾಜನದಿ
ಸವಿಗೂಡಲಿದುವೆ ಧಾರ್ಮಿಕರಸಾಯನವಹುದು! ೨

ಅಪ್ಪುದಪ್ಪುದು; ಬರಿದೆ ಹಗರಣಂಗೊಳ್ಳುವೆನೆ?
ಕಣ್ಮನಂಗಳ ಹಬ್ಬದೂಟವಂ ನೂಕುವೆನೆ?
ನೂಕೆನದೊ ತೋರುವಳು! ಮಿರುಗುವಳು! ಭಾವನಾ

ಶೈಲೂಷಿಯಂತರಂಗದ ರಂಗವೇರುವಳು!
ಬೆಳ್ಳರಾಸರೆಗುಡಿಗಳಿಂ ಸುತ್ತುಗೊಂಡ ನಡು
ವಣ ಮುನಿಜನಾಶ್ರಮಗಳೆಸಳಿನೊಳಗಣ ಪರಾ
ಗದ ಪುಟ್ಟಕೆಗಳಂತೆ ಸಾರಾವತಾರವೆಂ
ದೆನಿಪ ಜೇನ್ನೆಯ್ಯ ಬಟ್ಟಲುಗಳಾಗಿರ್ದು ಕಂ
ಗೊಳಿಸುತಿವೆ; ಮಸಗುತಿಹ ಸಂಸ್ಕೃತಿಯ ಸೌಸವವ
ನೆತ್ತಲೂ ಸೂಸುತಿವೆ ನೋಡು. ನೆಲೆವಡೆದಾರ್ಯ
ಧರ್ಮಧ್ವಜವೆ ಯಾಗಧೂಮರೂಪವನಾಂತು
ಬಾಂದಳದ ರಂಗದಲಿ ಮೆಲ್ಲೆಲರ ಮೇಳಕನು
ವಾಗಿ ಬಗೆಬಗೆಯ ಬಿನ್ನಣದ ಬೆಡಗೆಸೆಯೆ, ಭಾ
ವಪ್ರಪಂಚವನಭಿನಯಿಸುವ ಕಾದಂಬಿನಿಯ
ಹುಬ್ಬಾಗಿ ಕೊಂಕುಗೊಂಡಲೆದು ಬಲಿದೌಕುತಿದೆ—
ಭಾವುಕರ ಬಗೆಗೆ ಸಂಕಲೆಯನಣಿಗೊಳಿಸುತಿದೆ.
ಆ ಹೊಗೆಯ ನಿಚ್ಚಣಿಗೆಯೊಳಗಿಳಿದು ಬಪ್ಪಲ್ಲಿ
ನೋಡಯ್ಯ! ಬನರಾಣಿಯೊಡ್ಡೋಲಗಕ್ಕೆಂದು
ತಂಗಾಳಿಯಂತೊಲೆದು, ಚೆಂದುಂಬಿಯೆನೆ ನಲಿದು,
ಬಂದು ಕಂಪನು ಹೀರಿ, ಚೈತನ್ಯದೊಡನೇರಿ,
ಹಾರುತ, ದಿಗಂತದೊಳಗೀ ನಾಡ ಕೀರ್ತಿಯನು
ಬೀರುತಿಹ ಭಾವುಕರ ಬಗೆಯಲ್ಲಿ ರಾಗವ
ನ್ನೊಸರಿಸುವ ಕೋಗಿಲೆಯ, ನುಡಿಗೊಂಕನೆಬ್ಬಿಸು
ತ್ತಿಹ ಗಿಳಿಯ, ಗರಿಕಟ್ಟಿ ಕಣ್ಣಾಡಿ ಕುಣಿವ ನವಿ
ಲಿನ ಗೊತ್ತು—ಹುರುಳುಗನ್ನಡನುಡಿಯ ಬೀಡಿದಾ
ವುದು! ಮರೆವೆನೇ—ಮನಂಬಿಡಿವ ಬನವಸೆನಾಡು! ೩

ತನ್ನೋಲಗದ ಹಗಲ ಸಿಂಹಾಸನವನಿಳಿದು,
ರವಿಯೆ ಪಶ್ಚಾನ್ಮುಖಂ ಬಡೆದ ಮೇಲಾತಪದ
ಮೈಮೆಯುಳಿಯದೆ ನೆಲಸಿ ನಿಲ್ಪುದೇ? ಮೆಲ್ಲಮೆ-
ಲ್ಲನೆ ಕುಂದಲಾರಂಭಿಸಿತ್ತು; ನೀರೇರಿ ತಂ

ಗಾಳಿ ಬೀಸಲ್ಕೆ ಸಂಜೆಯೊಳೆ ಗುರಿವಡೆದು ತ
ನ್ನೋಜೆಯನ್ನಗಲತೊಡಗಿದನಕ್ಕಟಾ! ಕಾಲ
ಪುರುಷನಂ ತನ್ನ ನಂಬಿದ ದೈವವನ್ನಂತ
ರದಲಿ ನೆಲೆಗೊಳಿಸಿ, ಧರ್ಮಾನುರಾಗಸಮಾಧಿ
ಯನ್ನೇರಿ ನಿಂದ ಸಂಧ್ಯಾಂಗನೆಯನೀ ತಪನ
ನಾಸೆಗೊಂಡೇಕೆ ಮುಳುಗುವನೊ—ಲೋಕಕ್ಕೆ ಕ
ತ್ತಲೆಯನೆತ್ತುವನೊ? 'ಕಾಕಾಗತಿ'ಯೆನುತ್ತ ಕಾ
ಗೆಗಳಿಂತು ಬಾಯ್ಬಿಡುತ ಬಪ್ಪುದೇನಾಗದೇ? ೪

ಬಾಂದಳದ ಬವಣೆಯುಂತಾಗಲಾ ತಪ್ಪಲಿನ
ತಾಪಸಾಶ್ರಮವಿಡಿದು ಪಸರಿಸಿದ ಕಾವಿನಲಿ
ಕಂದೆರೆಯೆ ಗರಿಗೊಂಡ ಕಣ್ಗೆ ಕಾಣಿಕೆಯಾದ—
ಕನವರಿಕೆಯಲ್ಲಿಯೂ ಕಾಣದಿಹ ಕಣಿಯಿದೇಂ!
ಚೆಂದಳಿರುವೊದೆದ ಮಾಂಬಳ್ಳಿಯೊಂದೀ ಗಾಳಿ
ಗಲುಗಾಡುತಿದೆ; ಮೆಯ್ಯನಂಗವಿಸಿ, ಕೆಂಗಣ್ಣ
ಹಕ್ಕಿ ಕೇಕರಿಸುತಿದೆ; ಜುಂಜುಮಿಪ ಮರಿದುಂಬಿ
ಗಳ ಬಳಗವಲೆಯುತಿದೆಯೆಂದು ನಿರ್ಧರಿಸುವೆನೆ?
ತೀರದೀ ಪರಿಯಲ್ಲಿ ಮಾಂಬಳ್ಳಿ ದಳವಡೆದು
ಚಿಗುರಲಿಹುದೇ! ಚಿಗುರಲೇನಿಂತು ನಡೆಯುತಿರ
ಲುಂಟೆ! ಪೋ ಮಾಣು; ಮುಖಮುಂಡಲಂ ಸುವ್ಯಕ್ತ
ವಾಗಿ ತೋರಿತ್ತದೋ! ಲತೆಯಲ್ಲವೈ—ಲತಾಂ
ಗಿಯೆ ನಿಜವಿದೆಂಬೆನಹುದಾದರೀ ಕಗ್ಗಾಡಿ
ನಲಿ ದೇವಲೋಕವೂ ಕಂಡರಿಯದಿಹ ಕೇಳ
ದಿಹ ಚೆಲುವಿನೊಂದು ಮೈಯೆಂತು ತಲೆಯೆತ್ತಿತೋ! ೫

ಅಂತಲ್ಲವಂತಲ್ಲ—ಕಣ್ಗುರುಡನಾನಲ್ಲ—
ಕಾಣಿಕೆಯ ಹುರುಳು ತಿರುಳಾಗಿ ಬಗೆಗಂಟದುದು.
ಬನವಾಸಿಯಲ್ಲಿ ಮನವಾಸೆಗೊಂಡಿರುತಿದ್ದ

ಮುನಿಗಳಂತರದಲಿ— ಸಮಾಧಿಗರ್ಭಾಲಯದಿ
ಮೂಡಿ ತಲೆದೋರಿದಾ ಧರ್ಮಸಂಸ್ಕೃತಿದೇವಿ
ಬಾಹ್ಯಜಗವನ್ನೊಮ್ಮೆ ನೋಡಿ ಪಾವನವೆಸಗ
ಬೇಕೆನುತ್ತಿಂತಲೆಯುತಿರಬಹುದು—ಬೇಕದೋ
ಬಗೆಯ ಭರಿತಂಗಳಲಿ, ಯೆಣಿಕೆದುಂತುರಿನಲ್ಲಿ,
ಕಡೆಗಣ್ಣ ಸುಳಿಯಲ್ಲಿ, ಕೈನೆರಳಿನಲುಗಿನಲಿ,
ಮೋರೆಯನುಭಾವದಲ್ಲದೊ ಪಂಚಗವ್ಯವನು
ತಳಿದು ಪರಿಶುದ್ಧಿಗೆಯ್ವುದು ತಾನೆ ತೋರುತಿದೆ!
ಮೆಲ್ಲಡಿಯನಿಡುತಿಹಳು; ವಿಶ್ವಸಂಚಾರಕಾ
ಶಿಸುವ ಕಿರುಗಾಳಿಗೊಳ್ನಡೆಗಲಿಸಿ ಹರಸುತ್ತ,
ಗುರುವನವಗಣಿಸುತಿಹ ಬಾಲಕರವೊಲು ಮುಂದೆ
ಬಿರುಸೆದ್ದು ಮರುಳಾಗಬೇಡೆಂದು ಬೋಧಿಪಳೆ?
ಮಾತುಬಾರದೆ ತೊದಲು ನುಡಿವ, ನಸುನಗೆಯಿಂದ
ಲೊಳಗಂಪನೆಲ್ಲ ಬೀಸುವ, ಮರುಕದಿಂದಲೇ
ಮನವನೊಪ್ಪಿಸುತಿರುವ ತರತರದೆ ಮೈವಡೆದ
ವಿಶ್ವಸಂಸಾರ ಶಿಶುಗಳಿಗೊಲುಮೆವಾಲ ಹೊನ
ಲೂಡಿಸುವ ತಾಯಿೂಕೆಯೆನ್ನುತ್ತಲೆಣಿಸುವೆನು.
ಹಿಂದುಮುಂದಕೆ, ಪಕ್ಕಗಳಿಗಡಿಗೆ, ಬಾಂದಳಕೆ
ನೋಡುವಳದೋ ಪಡುವಲಿಳಿವ ಹೊತ್ತಿನೊಳು ಕ
ಣ್ಣಾರಿ ನಿಂದಳು! ಚೆಂದುಟಯೊಳೇನೊ ತಿರುಸೊಲ್ಲ
ನೆತ್ತಿ ಕೈಮುಗುಳನದೊ ಹಣೆಯಲ್ಲಿ ಸೂಡುವಳು;
ಏನಿದಿಂತಿನಿತೊಂದು ನಿಯಮ ನಿಯಮಿತ ಪೂಜೆ
ಯಾಗಿರಲುಬಹುದೆಂದು ಭಾವಿಸುವೆನಂತರದೆ! ೬

---

## ಎರಡನೆಯ ಖಂಡ

ಪಡುಗಡೆಯೊಳೆತ್ತಣಿಂದಲೊ ನಾದದೊಸರೊಂದು
ಹೊನಲುಕ್ಕಿ ಹರಿದು ಬರುತಿದೆ—ಕಿವಿಗೆ ನುಸುಳುತಿದೆ.
ಕಡಲಿಳಿತಭರಿತದಿಂದೊಗೆವ ರವವೆಂಬೆನೇ?
ದನಿಯಿದರ ಸವಿಯನೇನದರೊಳಗೆ ಕಾಂಬೆನೇ?
ಕಾಣೆನಂತಾದರೀ ಕಿವಿಯ ನಲಿಯಿಸುವ ಸರ
ಕಾಸರೆಯದೇನೆಂದು ಕಣ್ಣರಸತೊಡಗಿದುದು!
ಅದ್ವೈತಭಾವದಿಂದೆದೆರಾಗವೇರಿರುವ
ಪಡುವದೆಸೆಯಲಿ ಭೇದವನ್ನರಸಿ ಕುರುಡಾದೆ
ನಾನಂದರಸದ ತಲೆಯುಂ ಹೊತ್ತು ಲೋಕಕ್ಕೆ
ತೋರಿ ನೇಸರು ಮುಳುಗಿ ಮೂಡಿ ಕಣ್ಮರೆಯಾಗೆ,
ರಾಗದೆದೆಗೂಡಿದಾ ತಂತಿ ಕಡಿದುದೆನಲ್ಕೆ,
ಮೆಲ್ಲಮೆಲ್ಲನೆ ಬಾಂದಳದ ಕೆಂಪು ಮಾಸಿದುದು;
ಪ್ರಣಯಕುಪಿತದ ಸನ್ನೆ, ಚುಕ್ಕಿಗಳ ಹಕ್ಕಿಗಳ
ಮಿನುಗಿಂದೆ ಕೂಗಿಂದೆ ಬಯಲಾಗತೊಡಗಿದುದು. ೧

ಆಗಳೆ ಕಡಲ್ಮಟ್ಟ ಬಾಂದಳಗಳಂತರದ
ಸೀಮೆಯನ್ನಳೆವವೋಲೊಂದಪೂರ್ವವ್ಯಕ್ತಿ
ತೆಂಕಣಿಂ ಬಡಗಲಿಗೆ ದೂರದಲಿ ನೇರಾಗಿ
ಹರಿಯುತಿದೆ—ನಾದವದರತ್ತಣಿಂದುಕ್ಕಿ ಬರು
ವಂತಿಹುದು! ತಾನದೇಂ ಹಡಗಾಗಿರಲ್ಬಹುದೆ?
ಬಹುದೆಂದು ಬಗೆವಲ್ಲಿ ಬಡಗಣಿಂ ಮೂಡಲಿಗೆ
ತಿರುಗಿದುದು—ಭಾವನೆಯ ತಡೆದು ಸಮ್ಮುಖಕಾಯ್ತು!
ಹಡಗಲ್ಲವಾವ ಪಿಡುಗೋ ಎಂದು ನಡುಗಿದೆನು!
ಕಾಣದ ಪುರಾಣದೊಳಗೊಂಡಿರುವ ರಣಹದ್ದೊ!
ಗಂಡವೋ! ಮೇಣು ಭೇರುಂಡವೋ! ಬೆರಗಾದೆ
ನಷ್ಟರೊಳಗೆನ್ನ ತಲೆಯುಂತರಕ್ಕದು ಬಂದು

ಮುಟ್ಟತಂಜಿಕೆ ಮರುಳುಗುಣಿಯಲಿಕೆ ಗೆಜ್ಜೆಯನು
ಕಟ್ಟತೆದೆಯಳಲನೆಣಿಸಲಿಕೆ ತಾನೆಣಿಸಿ ಮನ
ಮರುಗಲಾ ಗಾಳಿದೆವ್ವಕೆ ಕಣ್ಣೊಳೇಂ ನೆತ್ತ
ರಿಪ್ಪುದೇ! ತೆಂಕಲಿಗೆ ಸಾಗಿದುದು; ಪಡುವಲಿಗೆ
ಹರಿದು ಹೋದುದು; ಬಡಗಲಿಗೆ ಬಾಗಿದುದು; ಮತ್ತೆ
ಚಚ್ಚೌಕವಾಗಿ ಸುಳಿಯುತ ಮಂಡಲಂಬರಿಯ
ತೊಡಗಿತಚ್ಚರಿಯನೆನ್ನೆದೆಯೊಳಚ್ಚೊತ್ತಿದುದು! ೨

ಏನಿದೇನೆಂದೆಣಿಸುವಲ್ಲಿ, ಭೇರುಂಡವಾ
ಗಾಳಿವೊನಲಲಿ ಹರಿವಣಂದಿರಿದು ಕೆಳಗೆ ಕೆಳ
ಗಿಳಿಯುತ್ತ ಕಾಡ ಹೆಮ್ಮರ್ರಗಳಂತರಕಾಯ್ತು!
ಭೇರುಂಡವೋ, ಗಂಡವೋ, ತಿಳಿವ ಕವಲೇತ
ಕೀ ರುಂಡಕೆಂದಿಳಿವ ಗಂಡವೇ ಸರಿಯೆಂದು
ಭಾವಿಸಿದ ಮೇಲೆನಗೆ ಭಾವಿಪಾ ಬಗೆಯಿಲ್ಲ!
ಕಾಣುವಾ ಕಣ್ಣಿಲ್ಲ! ಕೇಳುವಾ ಕಿವಿಯಿಲ್ಲ!
ಭಯರಸಕೆ ಪಕ್ಕಾಗಿ, ಮಿಡುಮಿಡುಕುತೆಕ್ಕಾಗಿ,
ಬಗೆಯೊಂದು ಸಿಕ್ಕಾಗಿ, ಬೆದರಿದೆನು ಬೆಕ್ಕಾಗಿ!
ನೆನಸಲ್ಲ ಕನಸೆಂದು ಹೊಸಗನಸುಗಾಣಲಾ
ಹದ್ದು ನೆಲಕೆನ್ನದೆ ರಸಾತಳಕ್ಕದ್ದಿದುದು! ೩

ಆ ಗಂಡದೆದೆಯ ಗಂಡೇ ಮೆಯ್ಯನಾಂತು ನೆಲ
ಕವತರಿಸುವಂತೊಬ್ಬನಿಳಿದನೊಳಗಿಂದವನ
ಮೆಯ್ಗಟ್ಟನಿಕ್ಕೆಯನ್ನೊಡ್ಡಾರದಂದವ
ನ್ನೆನ್ನ ಬೆದರೆದೆಯಿದೆಂತಿದ್ದಂತೆ ಬಣ್ಣಿಪುದು?
ಆದರೇನಂದು ಚಿತ್ರಕನ ಕಣ್ಣೆದೆಗೊಪ್ಪಿ
ಸಿದ ಭಾವರೇಖೆಯನೆ ಬಣ್ಣಗೊಳಿಸುವೆನಿಂದು.
ಹಸುರುಗಲ್ಲಿನ ಹಾಸುದಪ್ಪಲಿನ ಹೇರೆದೆಯ
ಮೇಲೆ, ಮಲ್ಲಿಗೆವಳ್ಳಿ ತುರುಗಿ ಹಾರಾಕಾರ

ವಾಗಿ ಹಬ್ಬಿದ ಕೊರಳಪೀಠದಲಿ ನೀಲಮಣಿ
ಮೂರ್ತಿ ಮುಖಮಂಡಲಂ ಪಲ್ಲವಿಸೆ, ಕೆವ್ಮೊಸೆ
ಯಿಂದೆ ಗುಡಿಗೆತ್ತಿ ಕಟ್ಟಿದ ತೋರಣದ ಹುಬ್ಬು
ಗಳಮೇಲೆ ಶೃಂಗಾರವೀರರೌದ್ರಗಳೆಂಬ
ಮುವ್ಮೆಯ್ಯ ರಸದೇವನೆಡೆಬಿಡದೆ ಸನ್ನಿಧಾ
ನಂಗೊಂಬ ಮಣೆಯ ಹಣೆ ತಳತಳಿಸಲೊಂದೋಜೆ
ಗಿಂಬಾದ ದಡಿಗನಿಳಿದಂ ನೆಲಂ ನಡುಗುತಿರೆ! ೪

ಮೊಗದೊಪ್ಪವನು, ಮಂದಹಾಸವನು, ಕಡೆಗಣ್ಣು
ಕೆದರುತಿಹ ಕಾಂತಿಯನು, ಹಣೆಯಲ್ಲಿ ಮೂಗೆರೆಯೊ
ಳೆಳವಟ್ಟ ಭಸಿತವನು ಕಂಡಿವಂ ಶೈವನಾ
ಗಿರಬೇಹುದೆಂದು ಬೆದರಿಕೆ ಸಡಿಲುತಿರುವಲ್ಲಿ,
ತಿರುಗಿದಂ– ಬನರಾಣಿಯಂತಲೆವ ನರ್ತಿಸುವ
ಕನ್ನೆಯನ್ನೊಲುಮೆಗಣ್ಣಿಂದೌಕುತೆಯ್ದಿದನು!
ಆದರೇನೆನ್ನ ಮನವನ್ನಂತು ಕಾಯಿಸಿದ,
ಮುಳುಗಿಸಿದ, ಮೇಣೆತ್ತಿ ಬಡಿದು ಮೆದುವಾಗಿಸಿದ,
ಆ ನೋಟವಾ ಬರವದಂತುಟಾದಾ ರೂಪ
ವಾವುದರೊಳೂ ದೇವಿಯಂತರಂ ಸಿಲುಕದಿ
ದ್ದುದು; ತಾನೆ ತಾನಾಗುತೊಳಗಣಾವುದೊ ಗಾನ
ಮಂಜರಿಯ ಜೇನೊಳಗೆ ಜಂಜಿಣಿಸುತಿರುವ ಮರಿ
ದುಂಬಿಯಾಗಿದ್ದುದೆನ್ನದೆ ಬಂಜೆಯಾಡುವೆನೆ?
ಅತ್ತಿತ್ತ ಹರಿಯುವಳು! ಮೊಗವೆತ್ತುತೊವ್ಮೊಮ್ಮೆ
ನೋಡುವಳು! ಕಣ್ಣೊಳೇ ನುಡಿದು ಮರುನುಡಿಯುವಳು!
ಮಿಸಲಾದನುಭಾವವಂತಲುಗುತಿರೆ, ವಿಭಾ
ವಂ ಕಂಪುವೀರುತಿರಲುದ್ದೀಪನಂ ಮಿಂಚಿ
ಮಿರುಗುತಿರೆ, ಬಳೆಯುತ್ತ ಪಳಗುತ್ತ ಹೊಳೆಯುತ್ತ
ಲೆದೆಗೊಂಡ ಭಾವವದು ವಿಶ್ವಪ್ರಪಂಚದಲಿ
ದಾಂಗುಡಿವಡೆದು ಹಬ್ಬಿ ಹರಡುತಿರುವವಸರದಿ

ಸಂಚಾರಿಯಾಗಿ ತಲೆಯಿಕ್ಕಿದಾ ಹೊಸಬನೀ
ತಂ ಚಾರಿವರಿದು ಪಕ್ಕಂಗೊಂಡನೋಸರಿಸಿ. ೫

ಸಂಬೋಧಿಸುವ ಮಾತದೇನೆಂದು? ವೈಸಿಕದ
ಮುದ್ದೆನಿಪ ನುಡಿಯ ಕಟ್ಟನ ಮೆಯ್ಯದೆಂತು? ಹುರು
ಳೆಂತಲ್ಲಿಗಲ್ಲಿ ಜೀವಾಳವಪ್ಪಂತೆ ಕಳೆ
ಯಂ ಮಿಂಚುಗುಣಿಯಿಸುವ ಜಾಣ್ಮೆಗಟ್ಟನ ಮಿಾಸ
ಲಾದ ನುಡಿಗಳನರಸುತೆದೆಯೊಳಗೆ ಮುಂದರಂ
ಗಡೆಯುತ್ತಲಿದ್ದನಾ ಶೃಂಗಾರ ಭೈರವನು.
ಹೊಸಬನೀತಂ ಬಂದು ಕಾಲವನೆ ಕಾಯ್ದುಕೊಂ
ಡಿಹನೆಂಬುದಂ ಬಲ್ಲಳೇ ಮಹಾದೇವಿ! ಯೆವೆ
ದೆರೆದಿದ್ದರೇನೀ ಪ್ರಪಂಚವಂ ಮೊಗೆಮೊಗೆಯು
ತಿದ್ದ ಕಣ್ಗುಡುತೆಯೊಳಗಿವನೊಂದು ಬಿಂದುವಾ
ಗಿರಬಹುದು—ಮೇಣಿಲ್ಲದಿರಬಹುದು; ತಾನಂತ
ರಾಳರಂಗದಲಿ ನಲಿಯುತ್ತಲಿಹ ಮಾನಸದ
ಗಾಳಿಪಟವನು ಹಿಡಿದ ಕೆಯ್ಯ ಮೆಯ್ಯಾಗಿಹಳು. ೬

'ಬಾಲಿಕಾಮಣಿ' ಎಂದವಂ ಮುನ್ನುಡಿಯನೆತ್ತ
ಲೊಡನಾಶ್ರಮದ ಶಂಖನಾದವಾವರಿಸಿತ್ತು.
ನಾದವಲೆವಂತರವನೆಳೆಯೆ ಹೊರಗಣ್ಣಾಗಿ
ನೋಡಿದಳು ತನ್ನ ಮುಂಗಡೆಯಲ್ಲಿ ಕಣ್ಗೆ ಕಾ
ಣಿಕೆಯಾದ ವೀರಶೃಂಗಾರಮೂರ್ತಿಯನೊಂದಿ
ನಿಸು ತಡೆದು ಬೆರಗಾಗಿ ಮಾತನಿಂತೆತ್ತಿದಳು:— ೭

'ದಕ್ಷಿಣಾಪಥ ಚಕ್ರವರ್ತಿಯೇ! ಬಂದುತಡ
ವಾದುದೇ? ಬಗೆಗೆರಗಿ ಶಮದಮಾದಿಗಳೊಳವ
ನಾರಯ್ಯುತಿದ್ದೆನಾಂ. ಪೂಜ್ಯಪೂಜಾವ್ಯತಿ
ಕ್ರಮಕೆಳಸಿದವಳೆಂದು ಶಂಕಿಸದಿರಾಶ್ರಮಂ

ಬಳಿಯೊಳ್ಳೈಸೇ; ನಡೆಯುತಾತಿಥ್ಯವನ್ನೊಂದು
ತಿರುಳ ಕತ್ತಲೆಯೊಡನೆ ತಲೆಯನೆತ್ತುವ ಸಂಶ
ಯಂಗಳನು ಗುರುಜನೋಕ್ತಿಯ ತತ್ತ್ವಸಾರದಿಂ
ಕಳೆದು ದಯವಡೆದೆಯ್ದಬಹುದೆ'ಂದ ನಲ್ನುಡಿಯ
ನಾಲಿಸುತ, ಮನವಂ ಬಲಿದು, ಮಂದಹಾಸದಿಂ
ದಂಬುಧಿಗಭೀರಮಂದ್ರಧ್ವನಿಯೊಳಾಡಿದನು:— ೮

'ಚೆನ್ನೆಯರರಸಿ ಕೇಳು; ನಿನ್ನಲ್ಲಿ ಶಂಕಿಸಲು
ತಿಂಗಳಲಿ ಕತ್ತಲೆಯ ಬಿತ್ತನರಸುವ ಬೆಳ್ಳ
ನಾಗೆನೇ? ನಿನ್ನ ಭಾವಾಂತರದ ಬಣ್ಣವ
ನ್ನರಿಯಲಾರದೊಡೆಂತು ಬೊಮ್ಮಂಗೆ ವೊಮ್ಮನೆಂ
ದೆನಿಸುವೆನವನ ಮೊಗದೊಳೊಗೆದ ವೇದಂಗಳನು
ಕಡೆದು ಬೆಣ್ಣೆಯನೆತ್ತುವೆನು—ನೆಲಕೆ ನೀಡುವೆನು?
ಹಲವನೆನ್ನುವುದೇಕೆ—ಗುರಿಗೊಳಿಪೆನಾಲಿಪುದು;
ಮನದ ಗೋಪುರವ ಕಲಶವನಿಟ್ಟು ಬೆಳಗುವುದು.
ಬೊಮ್ಮಕುಲದೊಳಗುದಿಸಿ, ಶಿವನೊಲುಮೆಯನು ಪಡೆದು,
ಧರ್ಮದಾಳಿಕೆಯನೆತ್ತೆತ್ತಲೂ ನೆಲದೊಳಗೆ
ಹಾಸಾಗಿ ಹೊಕ್ಕಾಗಿ ಹಬ್ಬಿಸಲು ಹರಡಿಸಲು
ನೋಂತಿಹೆನು. ದೇವ ದಾನವ ರಾಜರೆಲ್ಲರೀ
ಪಾದದೊಲವನ್ನಾಂತು, ಘೇಯೆಂಬ ಭೋಯೆಂಬ
ರಾವಣನೆ ಬಂದು, ನಿನ್ನಡಿಗೆ ಮುಡಿಯಂ ಚಾಚಿ,
ಜೀ ಯೆಂಬನೇಕೆಂದು ಕೇಳ್ವೆಯಾ ಹೇಳುವೆನು. ೯

ಮುರಿಯುತಿಪ್ಪತ್ತೊಂದು ಬಾರಿಯಾ ಕ್ಷತ್ರಿಯರ
ನಿಳೆಯಂ ಸುಧರ್ಮೆಯನ್ನೆಸಗಿ, ಕಡೆಯಲಿ ಪರಶು
ರಾಮನೂ ಮಂಕು ಮನವಂ ಪಿಡಿದು ನಿಲಿಸಲಾ
ರದೆ, ಮುಕ್ತಿಕಾಂತೆಯೆಂಬಳ ಕನಸುಗನ್ನಡಿಗೆ
ಮರುಳಾಗಿ, ಮರೆದು, ಕಳ್ಳರ ಕೆಯ್ಯೊಳೇ ಗಂಟ

ನೊಪ್ಪಿಸುವ ತೆರದೊಳಾ ಬಾಹುಜರ ಮಡಿಲೊಳೀ
ನೆಲವನೀಯುತ ಗೊಣಗುತಿಹುದನರಿದಪೆಯಲ್ತೆ?
ಪರಶುಧರನೆದೆಯಳುಕೆ, ದುಷ್ಟರಾಜರ್ಕಳಿಂ
ನೆಲವಧರ್ಮಾಕ್ರಾಂತವಾದುದನು ವಿಪ್ರಕುಲ
ದಧಿಕಾರವದರೊಡನೆ ಮಂಜಾಗಿ ಕರಗಿದುದ
ನೆರಡನೂ ನೋಡುತಿದಮಿತ್ಥಮೆಂದೆಣಿಸುತೀ
ಚಂದ್ರಹಾಸಾಸಿಯೊಂದನೆ ಸೆಳೆದು ಬೀಸಿದೆನು;
ಬೀಸಿ, ಧರ್ಮಾಧಿಕಾರವನೊಂದು ನೆಲೆಯಲ್ಲಿ
ನಿಲಿಸಿದೆನು. ಲೋಕವನ್ನಂತುಟೇ ಪಾಲಿಸುತ
ಬಹೆನಾದರೇನೆಳವೆಯಿಂದೋದಿ ಬಳೆದು ಬಗೆ
ಗಶನವಾದಾ ವೈದಿಕಾಗಮಂಗಳ ಧರ್ಮ
ಸಂಸ್ಕಾರವೇರಿ, ವೈರಾಗ್ಯಮಾರ್ಗವನು ಹಿಡಿ
ಹಿಡಿಯೆಂದೆನುತ್ತ ಬೋಧಿಸುತಲಿದೆ. ಹಿಡಿವೆನೆ
ನ್ನುವೆನೇ! ಮನಸ್ಸಾಕ್ಷಿ ತಲೆಯೆತ್ತಿ, ರಾವಣನೆ
ಕೇಳಯ್ಯ ರಾಜಧರ್ಮವನಂತು ಪ್ರಜೆಗಳಂ
ಕಡಲೊಳೆಸೆದಾ ಕೊಡಲಿಯಣ್ಣನಂದದೆ ಬಿಸಿಲು
ದೊರೆಗಾಶಿಸುವೆಯಾದರಿಂತುಟವ್ಯಾಪಾರ
ದಂಗಡಿಯೊಳಗೆ ಬೇರವನ್ನಿಟ್ಟುದೇಕೆಂದು
ಕೇಳುತ್ತಲಿದೆ. ಭಿನ್ನಭಾವಂಗಳಿಂತಿವೆರ
ಡಂ ಮಥಿಸಿ, ಸಾರವನು ಸವಿಯುತ್ತ, ಲೋಕವನು
ರಂಜಿಸಲ್ಬೇಕೆಂಬ ಗುರಿವಿಡಿದು, ಪುಷ್ಪಕವ
ನೇರಿ, ಮೆಯ್ಯಾಂತ ಕೈವಲ್ಯದೇವಿಯೆನಿಪ್ಪ
ನಿನ್ನನೇ ನೆರೆನಂಬಿ, ಸಾರಿ ಬಂದಿಹೆನೆನ್ನ
ನುದ್ಧರಿಸು—ಮುಳುಗಲಾಗಿಹ ಧರ್ಮವನ್ನೆತ್ತಿ
ನೆಲೆಗೊಳಿಸು. ವೇದವೇದಾಂಗಾದಿಗಳ ರಸಾ
ಯನದಿಂದೆ ಮೈವಳೆದ ಮುನಿಕುಮಾರನನೆನ್ನ
ನೊಲಿದು ಕೈವಿಡಿದು ಜೀವನ್ಮುಕ್ತನನ್ನಾಗಿ
ಸಲು ವೇದವತಿ ನೀನೆ ನೋಂತವಳು—ಬೇರಿಹರೆ?

ಕತ್ತಲೆಯೆನುತ್ತ ಬೆರಗಿಲ್ಲ; ಪುಷ್ಪಕವಿದೋ
ಹತ್ತಿ ಕಂದೆರೆವಲ್ಲಿ, ನಮ್ಮ ಲಂಕೆಯ ರಾಯ
ವೊಳಲ ಹೆಬ್ಬಾಗಿಲಲಿ ಗಂಟೆ ಘಣಘಣಿರೆನ್ನ
ಲಿಳಿದು, ಸಾಮಂತಸಚಿವರು ಪರಾಕೆನ್ನುತಿರೆ,
ನೂರಾಣಿಯಾಗುತೊಳವೊಕ್ಕೋಲಗಂಗೊಂಡು,
ಮೂಲೋಕವನ್ನೆನ್ನ ಕೆಯ್ಯ ಹಿಡಿದಾಳಿಸುತ,
ಪರದೈವವನ್ನಾಳ್ವ ಮೋಕ್ಷಾಂಗನಾವತಾ
ರಿಣಿಯಾಗು—ವಿಶ್ವಸಂಸಾರಕಾಸರೆಯಾಗು!'

ರಣಹದ್ದೊ! ಗಂಡವೋ! ಭೇರುಂಡವೋ! ಎಂಬ
ಕವಲೆಣಿಕೆಗಳ ದಳಂ ಕದಲಿದುದು. ಪುಷ್ಪಕವಿ
ಮಾನವಿಳಿದಾತನೇ ಗೋಮುಖವ್ಯಾಘ್ರನೆಂ
ದೆನ್ನಿಸುವ ಕೈಕಸಾಭವನೀಕೆ ಪುಣ್ಯವತಿ—
ವೇದವತಿಯೆಂದೆಂಬ ಮುನಿಕುಮಾರಿಕೆಯೆನು
ತ್ತಿರಿದು ಬೆದರಿಕೆಯನುಳಿದೆದೆ ಕೆದರಿತಕ್ಕಟಾ!
ಕುಡಿವಲ್ಲಿ ಹಾಲಾಗಿ, ಕಡಿವಲ್ಲಿ ನಂಜೆನಿಸು
ತಡರುವೊಂದಿಂದಲೇ ನೆಲದ ತಲೆಗೀ ಬೇನೆ
ಬೇಸರಿಕೆ ಸುಳಿದು ಕಟ್ಟಿಟ್ಟ ಮುಡಿಪಾಗಿಹುದು.
ನೋಡವನ ಮೋರೆಯನು! ನಾಲಗೆಯೊಳುಕ್ಕುತಿಹ
ನುಡಿಯೊಸರನೇಂ ಮನಂ ಬೇಡೆಂದರೂ, ಬುದ್ಧಿ
ಯಲ್ಲೆಂದರೂ, ಲಜ್ಜೆ ಹೊಲ್ಲೆಂದರೂ ತಲೆಯ
ನೆತ್ತಿ ದೇವಿಯ ಮೊಗಂ ನೋಡುತಿಂತಾಡುವಂ
ಗೇಂ ಧೈರ್ಯವೋ! ತಪ್ಪಿದೆಂ—ಧೈರ್ಯಹೀನರೇ
ನಲ್ಲವೇ ಧರ್ಮವೆಂಬಾ ನೆವವನೊಡ್ಡುವುದು?
ದೇವರಿತ್ತಾ ವರದ ಬಲ್ಮೆಯಿಂ ವಿಶ್ವವ
ನ್ನಾಡುಂಬೊಲಂ ಮಾಡಿ, ದುರುದುಂಬಿವೊಲು ಕಾಡಿ,
ಬೀದಿವರಿಯುತ್ತಿರುವನಕಟ! ಕಲಿಯುಗವೆನಲ-
ಧಾರ್ಮಿಕರು, ಕಾಕಪೋಕರು, ನಾಟಕಂ ನಲಿವ

ರಂಗವೆನ್ನುತ ಸಾರುತಿರುವ ಪೌರಾಣಿಕರ
ದೇನಿವನ ನಡವಳಿಗೆ ಕಣ್ಮುಚ್ಚಿ ಕುಳಿತಿಹರೆ?
ಬರಿದೇಕೆ ಮನದೊಳೀ ಮೆಣಸನರೆಯುತ್ತಂತ
ರಂಗವನೆ ಸುಟ್ಟುಸೂಯೆನ್ನುವೆನು—ಬೇಯುವೆನು? ೧೧

ರಕ್ಕಸನ ಕೊಂಕುನುಡಿಗಳನಾಲಿಸುತ್ತಿದ್ದ
ವೋಲು, ದೇವಿಯ ಮೊಗಂ ಬಿಸಿಲಿಂದೆ ಮುಗಿಲಿಂದ
ಲಾವರಿಸುತಿದ್ದುದಲ್ಲಲ್ಲಿಗೊಂದೆರಡಾಲಿ
ವಣ್ಣಾಲಿಯಿಂದುದಿರುತಿದ್ದುದಾತನ ಮಾತು
ನಿಂತುದೆನೆ, ಮೆಲ್ಲಮೆಲ್ಲನೆ ಮೊಳಗಲನುವಾಯ್ತು. ೧೨

'ರಾಕ್ಷಸಾಧಿಪ! ನಿನ್ನ ಮೊಗ ನೋಡಿ, ನುಡಿಗೇಳಿ,
ಕಿವಿಯ ಚಿತ್ರಂ ಕಣ್ಣ ಮುಂದೆ ನಿಂತಂತಾಯ್ತು!
ಮೆದುಳೆ ಗೆದ್ದಲೆಯಾಗೆ, ಮಸ್ತಕದ ಪುಸ್ತಕದೆ
ತುರುಕಿ ತುಂಬಿದ ವೇದವೇದಾಂಗವೆಲ್ಲವೂ
ಮಣ್ಣಪುಡಿ ಗಾಳಿಗಂಟೆನಿಸದೇ? ಶೀಲದಲಿ
ಸಮರಸಂಬೆರೆಯದಕ್ಕಮೆಯೋದು ಕುತ್ತಾದು
ದೆಂಬ ಮಾತಿಂದು ನಿನ್ನಲ್ಲಿಯೇ ಮಣಿಯಾಯ್ತು!
ಅಂತಲ್ಲದಿರಲಿಂತುಟೇಂ ನವೀನಾಗಮವ
ನೋದುವೆಯ—ಟಪ್ಪಣಂ ಬರೆದು ಬೋಧಿಸುವೆಯಾ?
ಸಂಸಾರದಲಿ ಹೇಸಿ, ತತ್ತ್ವಸಾರವ ಸವಿದು,
ಶಮದಮಸಮಾಧಿಗಳ ಬಯಕೆಯೊಳೆ ಬಗೆದುಂಬಿ
ಈ ಪುಣ್ಯವಾಹಿನಿಯ—ವರದಾನದಿಯ ತಡಿಯ
ಬನವಸೆಯ ಗುರುವರ್ಯರಡಿಯೊಳಾಸರೆವಡೆದು,
ತನ್ನನೇ ಹಿಡಿದು, ತನ್ನೊಳೆ ಗುರಿಯನಿಡುತ ಹಿಡಿ
ಗುರಿಗಳನ್ನೊಂದಾಗಿಸುತಲೂರು ಬಿಟ್ಟರೂ
ಹೊಲೆಗೇರಿ ಬೆಂಬಿಡದೆ ಬಂದುದೆಂಬಂತಾಯ್ತು!
ಹೋಗಲದು; ಕಡಿದ ನೀರೇಂ ಮರಳಿ ಕಟ್ಟಕ್ಕೆ

ಬಪ್ಪುದೇ? ಬಾರದಿನ್ನಾದರೂ ನಡವಳಿಯು
ನಚ್ಚುಗಟ್ಟಾಗಿಸೈ; ನುಡಿವಳಿಯೊಳಗೆ ಕೆಸರ
ನೂರಬಿಡದಿಹುದದಕೆ ಬಗೆಯೊಸರ ಬಿಂದು ಮು
ತ್ತಿನ ತಂದಲಾಗಿರಲು ಬೇಕದಕೆ ದುರ್ಭಾವ
ದುಶ್ಶೀಲ ದುಸ್ಸಂಗಗಳನುಳಿಯಬೇಕಯ್ಯ.
ಬರಿಯೋದು ಗಿಳಿಯೋದು; ರೋಗವದು ಮದ್ದೊಂದ
ರಿಂ ತೊಲಗುವುದೆ? ಪಥ್ಯವೆಸಗಯ್ಯ! ನಿನ್ನ ತಲೆ
ಯಲಿ ತೆಂಕನಾಡಿನಾಳಿಕೆಯಿಹುದು; ನಿನ್ನ ನಡೆ
ಯಲಿ ದೇಶದೊಳ್ಪು ತಲೆಕೆಳಗಾಗಬಹುದಂತ
ರಿಂದಿಂತು ಸಾರಿದೆನು — ಸೆರಗಿನಲಿ ಗಂಟಿಕ್ಕು!
ನೆತ್ತರಲಿ ಬೇರಿಳಿದ ರಕ್ಕಸಿಕೆಯನು ಕೀಳು!
ಕುಲವೆಂದು, ಬಲವೆಂದು, ಚಲವೆಂದು, ನೆಲವೆಂದು,
ಚಾವಡಿಸುತಂತರಂಗದ ಬೀಗವಂ ಮುರಿಯ
ಬೇಡ; ತಾವೆನಿಬರಿಂತಗ್ಗಳಿಸಿ, ಹೇಳ ಹೆಸ
ರಿಲ್ಲದಂತಾಗಿ, ಮಾಸಿದರೆಂಬುದನ್ನೆಣಿಸು!
ಮರುಳು ಮನವನು ಬುದ್ಧಿಯಿಂದ ಸಂಕಲೆಗೊಳಿಸಿ,
ಗುರುಗಳಡಿಯನು ಹಿಡಿದು, ನೆಲವನೊಲವಿಂದಾಳು!' ೧೩

ಸನ್ನಿಪಾತಕ್ಕೆ ತಣ್ಣೀರು ಗುಡಿದಂತಾದು
ದವಳ ಮೆಲುಮಾತು. ರಾವಣನ ಕಣ್ಣಲಿ ಕೆಂಡ
ವುದಿರತೊಡಗಿದುದು! ಕೇಸುರಿ ಸೂಸಲಾರಂಭ
ವಾಯ್ತು! ನುಡಿಯುಡುಗಲಡಿವಿಡಿದು ಮುಡಿವರೆಗೆ ಮೈ
ಗಡಗಡನೆ ನಡುಗೆ, ಹುಬ್ಬಿನ ಕೊಂಕು ಹರನ ಶೂ
ಲದ ಕೊಂಕೆನಲ್ಕೆ, ಕೆವ್ಮೀಸೆ ರಂಗಂಬೊಕ್ಕ
ವೋಲಾಗೆ, ಸಿಳ್ಳೆಂದು ಮೆಯ್ ಸಿಡಿದುದಾ ಪುಣ್ಯ
ಮೂರುತಿಯನವುಕಿ, ಕಪಿಲೆಯನಪ್ಪಳಿಸುವ ಹುಲಿ
ಯಾಗಿ ತೋರಿದನಯ್ಯೊ! ಮೂರ್ಖಂಗೆ ಬುದ್ಧಿಯನು
ಹೇಳುತಿಂತಾಯ್ತೆಂಬೆನೇ! ಹೇಳದಿದ್ದರದ

ರಿಂದಲೇ ಹಾಗಾದುದೆನ್ನುತಿದ್ದನೆ! ಬರಿದೆ
ಮಂಕಿನೆಣಿಕೆಗೆ ಗಂಟೆಗಟ್ಟಿ ಬಿಡಲೇತಕಾ
ರಕ್ಕಸನ ಜವನ ಪಾಶದ ತೋಳು ವೇದಸಂ-
ಸ್ಕೃತಿವಿಲಾಸಿನಿಯ ಮರುವುಟ್ಟೆನಿಪ ವೇದವತಿ
ಯನು ಪಿಡಿದು, ಜಡಿದು, ಜಂಕಿಸಿ ಸೆಳೆದುದಟ್ಟಹಾ
ಸಂ ದೆಸೆಗೆ ಮಸಗೆ, ವಾಹನದತ್ತ ಸಾರಿದಂ! ೧೪

ಕಾರ ಮುಗಿಲಿಂ ಸಿಡಿವ ಸಿಡಿಲಂತೆ ಸಿಡಿದಳಾ
ನಾರಿ! ಸೌಂದರ್ಯಸಾರದ ಮೋರೆ ಮಾರಿಯೊಂ
ದಾರಾಮವಾಯ್ತು! ಬೆಚ್ಚಿದಳೆ? ಬೆದರಿದಳೆ? ಹಿಂ-
ಜರಿದಳೇ? ಕಿಡಿಸೂಸೆ ಕುಡುಗಣ್ಣೊಳಸುರನಂ
ನೋಡಿದಳು! ರಕ್ಕಸನ ಕಲ್ಲಿನೆದೆ ಹೌವೆಂದು
ಹಾರಿದುದವಳ ಸೊಲ್ಲು ಸುಯ್ಯೆಂದು ಸೂಸಿದುದು!
'ಹೆಣ್ಣೆನುತ್ತವಗಣಿಸಿ ಮಾರಿದೇವಿಯ ಕಣ್ಗೆ
ಸುಣ್ಣವಿಕ್ಕಿದೆಯ? ಕೇಳೀ ನಿಮಿಷಕೀ ಶಾಪ
ಕಾಹುತಿಯನೀವಲ್ಲಿ ಮುಂಬರಿದು ಕೈಯೆತ್ತಿ
ಕಾವನಾವಂ ದೇವನಹನಿಹನು ಬಹನದಂ-
ತಿರಲಿ—ತಾನೀ ಜೀವರಾಶಿಯನ್ನೊಡಲೊಳಗೆ
ಹೊತ್ತಂತೆ ಹೆತ್ತು ಹೊರೆವೀ ಪ್ರಕೃತಿಯೊಡನೊಗೆದ
ಭೂದೇವಿಯಂಶದಲಿ ಜನಿಸಿದೀ ಹೆಂಗುಸರ
ಹುಟ್ಟುಗುಣವೆನಿಪ ಸೈರಣೆಯಿದೋ ತಡೆಯುತಿದೆ!
ಸೈಸುವೆನು ತಾನನಿತರಿಂದಲೇ ಹೆಂಗಳೊ
ಡ್ಡಿಂಗೆಸಗಿದಾ ಮಹಾಪಾಪವಿದು ಮಾಸಿತೆಂ
ದೆಣಿಸದಿರು—ಸಾರಿದೆನು! ನಡೆದು ನಿನ್ನಯ ಕುಲದ
ಧರ್ಮದೇವತೆಯಾದ ಕೈಕಸೆಯ ಕಾಲ್ಗೆರಗಿ,
ಪೆಣ್ಗುಲಗೆ ಮಾಡಿದಪರಾಧವಂ ಬಿನ್ನಯಿಸಿ,
ಕ್ಷಮೆವಡೆದು, ನಡೆಯುತಾಮೇಲೆ ಸಾಧ್ವೀಶಿರೋ
ಮಣಿಯ ಮಯಸುತೆಯ ಸನ್ನಿಧಿಗೆಯ್ದಿ, ಪಿಡಿದ ಕೈ

ಗೆಂಜಲಾದೆನೆನುತ್ತ ಕಲುಷವಂ ಕಣ್ಣನೀ
ರಿಂ ತೊಳೆದು, ಸೆರಗಿನಲಿ ಗಂಟಿಕ್ಕಿ, ಸಾವನ್ನ
ವೆಂದೆಂದಿಗೂ ಪರಸ್ತ್ರೀಯರಂ ನೋಡದಿರು!
ಮರೆದೊಮ್ಮೆ ನೊಡಿದರೆ, ನೋಟದಲಿ ಕೇಡೆಣಿಕೆ
ನುಸುಳಿದರೆ, ನಿನಗದೇ ಸುಡುವ ಕಿಚ್ಚಾಗುವುದು!' ೧೫

ಎಂದು ಗುಡುಗುಡಿಸುವಾ ಶಾಪಾಕ್ಷರಂ ಪರಿಸ
ರದಿ ಹಬ್ಬಿ ಹರಡಿದುದು. ಮುನಿವರರು ಬೆಕ್ಕಸಂ
ಬಡುತೋಡಿ ಬಂದರವರಲಿ ದಕ್ಷಿಣಾಪಥ
ಕ್ಕಾಚಾರ್ಯನಾದಗಸ್ತ್ಯಂ, ಪೂಜ್ಯತಮನಾದ
ಹಿರಿಯಂ ಪುಲಸ್ತ್ಯನೊಡನುತ್ತರಾಪಥದಿಂದ
ಕಾರ್ಯಾಂತರಂಬಿಡಿದು ನಡೆತಂದ ಕೌಶಿಕಂ,
ತೆಂಕನಾಡಿನ ಶಿರೋಮಣಿಯೆನಿಪ ವಾಲ್ಮೀಕಿ
ಮೊದಲಾದ ತಾಪಸಪ್ರಭುಗಳೆಡೆಗೊಂಡಿದ್ದ
ರವರೆಲ್ಲವರ ಪುಣ್ಯದರ್ಶನಂ ಸಂಗಡಿಸ
ಲೇನಾದುದೋ! ಬಲ್ಲರಾರಾ ಮಹಾಯೋಗಿ
ನಿಯ ಕಂಗಳೊಳ್ ಮೂಗಿನೊಳ್ ಬಾಯೊಳಂತೆ ಕಿವಿ
ಯೊಳ್ ರೋಮಕೂಪಂಗಳೊಳಗದೋ! ಚುಯ್ಯಚು
ಯ್ಯಗೆ ನೆಗೆವ ಪುಟವಡೆದ ಬಂಗಾರದೆಳೆಯೆನಿಪ
ವೇದಸಾರಾಗ್ನಿಕಣಮಾಲೆ ಸುರುಸುತ್ತಿ, ಮೂ
ವಣ್ಣಮಂ ಬೀರಿತೆತ್ತೆತ್ತಲೂ ಕೆಂಡವಂ
ಕಾರಿತ್ತದೋ! ಲಯಾಗ್ನಿಯ ನಟ್ಟನಡುವೆ ಸು
ವ್ಯಕ್ತ ಸೋಹಂಕಾರನಾದವದು ಮೂವಾರಿ
ನೆಗೆದುದೆಂಬನಿತರಲಿ ರಕ್ಕಸನ ಪುಷ್ಪಕಂ
ಬಾಂದಳವನೇರಿ ಸುಳಿಸುಳಿದತ್ತ ಮರೆಯಾಯ್ತು!
ನೆರವಿಗೂಡಿದ ಮುನೀಶ್ವರರಂತರಂಗದಲಿ
ಬಿಂದುಗೂಡಿರ್ದ ಚಿತೆಯೊಟ್ಟಿದುದು—ಕಟ್ಟಿದುದು! ೧೬

# ಮೂರನೆಯ ಖಂಡ

ಬನವಾಸದೆಡೆಯನಿರುಳಾವರಿಸೆ, ಮುಖಮಂಡ
ಲದೊಳು ಮೌನದ ಮುದ್ರೆಯೊತ್ತೆ, ನೆರವಿಯ ಭಾವ
ವಣೆಗೊಂಡುದನ್ನದಂ ಕಡಿದು ತನ್ನೆಣಿಕೆಯೊಡ
ಗೂಡಿ ಹರಿಯಿಸಲಿದೇ ಸಮಯವೆಂದೆಂಬುದಂ
ಬಗೆದು ವಿಶ್ವಾಮಿತ್ರಮುನಿವರ್ಯನೆಲ್ಲರೀ
ಕ್ಷಿಸುತಿರಲು ಮುಂಬರಿಯುತಾ ವಿರಾಗಿಣಿಯ ಯೋ
ಗಾಗ್ನಿಯಿಂ ಪುಣ್ಯತಮವಾದ ಮಸಣದ ಬೂದಿ
ಯನ್ನೆತ್ತಿದಂ; ನೆತ್ತಿಗೊತ್ತಿದಂ; ಹಣೆಯೊಳ್ ತ್ರಿ
ಪುಂಡ್ರರೇಖೆಯನೆಳೆದು ಮತ್ತೆ ಬಾಂದಳಕೆ ಮೊಗ
ವಂ ನೆಗಹಿ ನೋಡಿದಂ. ನೋಟವದು ಕೇಸುರಿಯ
ಸರಗಳಂ ತೆಂಕದೆಸೆಗೊಸಗೆಯೊಪ್ಪಿಸುವಂತೆ
ತೋರಿತ್ತು; ಘನನಿನಾದಂ ಹುರುಳ ಹೊರೆಗೊಂಡು
ಹರಿದತ್ತು; ಬಗೆಗಂಗಳವನತ್ತ ಬಾಗಿತ್ತು. ೧

'ರಾವಣಾ! ನಿನ್ನ ಕೈವಾರವೀ ಮಟ್ಟವ
ನ್ನೇರಿತೇ? ಬನವಸೆಯ ಗುಡಿಯ ನಂದಾದೀಪ
ವಂ ಬಡಿದು ನಂದಿಸಿದೆನೆಂದು ಮೇಣಾರ್ಯಧ
ರ್ಮದ ಮೂರ್ತಿಯಂ ಮುಸುಳಿಸಿದೆನೆಂದು ಬೆರೆಯುದಿರು;
ಶಮದಮದ ಕಡಿವಣಂಬಿಡಿದು ಮನವನ್ನೇರಿ
ವಿಶ್ವಪ್ರಪಂಚವನ್ನೊಂದಂಗಳಂಬರಿವ
ಮುನಿಗಳಿಗೆ ನಿನ್ನಡಂಗಿನ ಕಡಲದೀವಿಯೇ
ನರಿದೆ? ಕುಲಪತಿಯೆನಿಸಿದೀ ಪುಲಸ್ತ್ಯಬ್ರಹ್ಮ
ನಿಗೆ ಮೊಮ್ಮನಾ ವಿಶ್ರವಸುವ ಹೆಮ್ಮಗನೆನು
ತ್ತುಗುಳಲೊಲ್ಲದೆ ನುಂಗೆ ಗಂಟಲಂ ಸುಡುವೆಯಾ?
ಅಂದಿನಿಂದಿಂದುವರೆಗೂ ನಿನ್ನ ತುಳಿಲಾಳ್ಗ
ಳೆಮ್ಮುತ್ತರಾಪಥದೊಳೆಸಗುತಿಹ ಕಾಟವನು
ತಡೆಯಲಾರದ ನಮ್ಮ ನಾಡವರು ಬಪ್ಪ ಬವ

ಣಿಯನೆಲ್ಲವಂ ಕಂಡು ಮನಮರುಗಿ, ಬಂದೆನೀ
ದಕ್ಷಿಣಾಪಥದಾರ್ಯವೃದ್ಧರಲಿ ಬಿನ್ನಯಿಸು
ತವರೊಡಂ ಬೆರೆದು, ದೊರೆಯಾದ ನಿನ್ನೊಳು ದೂರಿ,
ದುಷ್ಟಶಿಕ್ಷೆಯನೊದಗಿಸಲುಬೇಕು; ನಿನ್ನಿಂದೆ
ನೀತಿನಿಯಮಂಗಳನು ನೆಲೆಗೊಳಿಸಬೇಕೆಂದು
ಭಾವಿಸಿದ ಬಗೆ ನೀರೊಳಿಟ್ಟ ಹೋಮದ ಮಂತ್ರ
ವಾಯ್ತಾದರೇನಾರ್ಯಧರ್ಮಸಾರವೆನಿಪ್ಪ
ಸೈರಣೆ ನೆಲಕ್ಕೆ ಕನ್ನಡಿಯಪ್ಪುದೆಂಬ ಮಾ
ತಂತಿರಲಿ; ತಾಂ ತೆಂಕನಾಡಂ ಗಿಳಂಕರಿಸಿ
ದೆನು; ಬಡಗನಾಡನಿನ್ನೇಂ ಗುಟುಕುಗೊಂಡು ಧ
ರ್ಶ್ರಂದು ತೇಗುವೆನಾರ್ಯರೊಳಗೆ ತನ್ನನು ತಡೆವ
ದೊರೆಯಾವನೀ ಮೂಗಿನೊಳು ಕಣ್ಣಿಡುವ ಮೂಗ
ರಿಂದೇನು? ತನ್ನ ನುಡಿ ನಡೆ ಹಿಡಿಗಳೆಂಬಾ ತ್ರಿ
ಕೂಟದೇರುಂದಲೆಯನೊತ್ತುವವರಿಲ್ಲೆಂದು
ಮರುಳೆದ್ದು ಕುಣಿಯದಿರ್! ಕುಣಿಯದಿರಿದೋ ಕಡ್ಡಿ
ಮುರಿದಿಹೆಂ! ಸಾರಿದೆಂ! ಕಡೆಗಣಿಸಿ ಕುಣಿದೆಯಾ
ದರೆ ಗಾಧಿಸುತನಾನೆಮೆಟ್ಟಿದುದೆ ಸಂದಪ್ಪು
ದೆಂಬುದಂ ಮರೆದೆಯೇಂ? ಕೆಟ್ಟಮೇಲೆಯ್ತುರುವ
ಬುದ್ಧಿಯಿಂ ಕಳವಳಿಸದಿರು! ಕನಂಬರಿಸದಿರು!' ೨

ಎನಲಗಸ್ತ್ಯಂ ಪೇಳ್ದ'ನಹುದು ಕೌಶಿಕನ ನುಡಿ;
ದೊರೆಯ ಬಗೆನುಡಿನಡೆಗಳಲ್ಲಿ ತನ್ನಂತನ್ಯ
ರೆನ್ನುವಾ ಧರ್ಮಸಾರಂ ಸೂಸಿ ಹೊನಲಾಗಿ
ಹರಿಯಲಾ ಬಗೆಯೊಳೇ ಬಳೆದ ಜನಸಂಕುಲವೆ
ಸಂಸಾರವೆನಿಪುದಂತಲ್ಲದಿರೆ, ಮಿಗಗಳೊ
ಡ್ಡಿನ ತೆರದಿ ನಿಸ್ಸಾರವೆನಿಸುವುದು. ರಾವಣನ
ವೃತ್ತಿಯತಿವೃತ್ತಿಯೆಂಬುದನು ಕಣಿಯಿಟ್ಟನ್ನು
ಕಾಣಬೇಕೇ? ಸಾಕದಂತಿರಲಿ; ನಮ್ಮವನು

ವೇದವೇದಾಂಗಾದಿಗಳನೋದಿದವನು, ಬಲು
ಬಲವಂತನೆಂದು ಪಟ್ಟಂಗಟ್ಟಿದುದು ದೋಷ
ವನೆ ಗುಣಂ ಬಗೆದು ಕಟ್ಟಿದ ಕಾವ್ಯಬಂಧದಂ
ತಾದುದೀ ಪರಿ ಪಾಡುವಟ್ಟನರ್ಥಕ್ಕೆ ನೆಲೆ
ಯಾಗಿ ನಿಸ್ಸಾರತೆಯನಾಂಪುದೇನಚ್ಚರಿಯೆ?
ಕಳೆದುದನ್ನೆಂದು ಕಂತಿದ ಮುಳ್ಳನಲುಗುತ್ತ
ಲಿರುವೆನೆಂದೆಣಿಸಬಾರದು. ನಮ್ಮ ಹಿರಿಯಂ ಪು
ಲಸ್ತ್ಯನಂದದೊಳಾದಿಯಿಂದಲೇ ರಾವಣನ
ರಕ್ಕಸಿಕೆಯನ್ನರಿತು ತಿದ್ದಿ ತಿಳುಹಲು, ನಡೆಯಿ
ಸಲು, ಬಲ್ಲಿದರು ಬದ್ಧಕಂಕಣರು ನಾಲ್ವರೊದ
ಗಿದ್ದರಾದರೆ ದೊರೆಯ ಶೀಲವಿಂತಾಗುತಿ
ದ್ದುದೆ? ಯೌವನಂ ಪ್ರಭುತೆಯೊಡನೆ ವನವಪ್ಪಲ್ಲಿ,
ದುರ್ಮಂತ್ರಿಮೃಗಸಂಕುಲಂ ಬಳಸದಿಪ್ಪುದೇ?
ಅದರಿಂದಲೇ ಪೂಜ್ಯಪಾದನ ಪುಲಸ್ತ್ಯನೊ
ಬ್ಬನ ಹವಣಿಕೆಯದೆಲ್ಲ ಮರಳಿನಲಿ ಬರೆದು ಮುಡಿ
ಲಲಿ ಕೂಡಿ ಕಟ್ಟಿದಕ್ಕರಗಳಂತಾಗಿಹವು.
ಹೋಗಲದು; ಮುಂದಿನ್ನು ಕೌಶಿಕನ ನುಡಿಯವೋ
ಲೀ ಪುಲಸ್ತ್ಯನನೆ ಮುಮ್ಮಾಡಿ ಕೆಲಬರು ಮುನೀ
ಶ್ವರರು ಲಂಕೆಗೆ ಪೋಗುತಿನ್ನೊಮ್ಮೆ ರಾವಣಂ
ಗೊಳ್ದಾರಿಯನು ತಿಳುಹಬೇಕದೂ ಬರದಾಗೆ
ಮೇಲ್ದಾರಿಯನ್ನರಸಬೇಕೆಂದು ಭಾವಿಪೆನು.' ೩

ನಾಯಕದ್ವಯದ ಮಾತುಗಳಿಂದಲುತ್ತರಾ
ಪಥ ದಕ್ಷಿಣಾಪಥಗಳಾರ್ಯಸಂಕುಲದೆದೆಯ
ನೊರೆದು ನೋಡುತ್ತಿದ್ದ ಪೂಜ್ಯಂ ಪುಲಸ್ತ್ಯನೆ
ಲ್ಲವರ ಬಗೆ ತನ್ನೆಡೆಗೆ ಬಾಗುತಿರೆ, ಭಾವಿಸುತ
ನುಡಿದ'ನೆಲೆ ಮುನಿಕುಲಾಗ್ರಣಿಗಳಿರ! ದೇಶಕಾ
ಲಂಗಳಹುದಹುದೆನಲು ನೀತಿಯಂ ರೀತಿಯೊಳ

ಲಂಕರಿಸಿ ನಾಡ ನಡವಳಿಗೆ ಕಳೆದುಂಬಿಸಲು
ಬಲ್ಲಿದರೆನಲು ನೀವೆ, ನಮ್ಮ ಕತೆ ಮುತ್ತುಮು
ಪ್ಪಿನಲಿ ಸುತ್ತಿತ್ತೊಂದ ನೆನೆವಾಗಳೊಂಬತ್ತು
ಕನವರಿಕೆಯೊಳಗಾಗುತಿಪ್ಪುದದರಿಂದಲೇ
ಹಲಬಾರಿ ಶಾಂತಿಕರ್ಮಕ್ಕೆ ಮಂತರಿಪಲ್ಲಿ
ಭೇತಾಳನೆದ್ದುದನು ನೀವೆ ಕಂಡಿಪ್ಪಿರದ
ರಿಂದೆನ್ನನಿನ್ನಾವ ಕಾರ್ಯಂಗಳಲ್ಲಿಯೂ
ತೊಡಗಿಸಲು ಬಾರದೆಂದೆನುತ ಬೇಡುವೆನಿದರೊ
ಳೆರಡಿಲ್ಲ; ಮನದೊಳಗೆ ಕರಡಿಲ್ಲವಯ್ಯ. ನ
ಮ್ಮಾರ್ಯಧರ್ಮವದೊಂದೆ ತಾಂ ನಿರರ್ಗಳವಾಗಿ
ನೂಲ್ವಿಡಿದು ಸುತ್ತಿ ಸುಳಿಯಲು ಬೇಹುದದರಿಂದೆ
ನಾಡ ಹಿಡಿ ನುಡಿ ನಡೆಗಳನುವಡೆದು ತಲೆಯೆತ್ತಿ,
ಜಗದೊಳೆಲ್ಲಂ ಜಂಗಮಾಕಾರವಾಗಿ ನೆಲೆ
ಗೊಳೆ, ವಿಶ್ವಸಂಸಾರನಾನಂದಭವನದೊಳ
ಗೊಕ್ಕಲಾಗುತ ಬಾಳಿ ಬಪ್ಪವೋಲಾಗುವಾ
ಗುರಿಯೊಳಗೆ ಕಣ್ಣಿರಲಿಯೆಂಬುದಿದು ಹೊಸದಲ್ಲ;
ಕೆಲವರಿಗೆ ಹೊಸದಾಗಿ ತೋರ್ಪುದನ್ನಿನ್ನೊಂದ
ನೆನ್ನುವೆನು ಕೇಳ್ವುದೀ ವಾಲ್ಮೀಕಿಯದ್ಯತನ
ರಾಗಿರುವ ಋಷಿವರ್ಗದೊಳು ನೆಗಳ್ತೆಯನೊಂದಿ
ದಾತನನಿತಲ್ಲವೈ ಬೆಳ್ಳರೊಳಗೆಲ್ಲ ಮೊದ
ಲಿಗನೂರಿನಂತರಂಗವನಳೆಯ ಬಲ್ಲಾತ
ನೀತನಂ ಕೈದಾಂಗುವಡೆದು ನಡೆಯಲು ದಾರಿ
ಯಂತೆ ಗುರಿಯಹುದು—ಭದ್ರಂ! ಶುಭಂ! ಮಂಗಳಂ!' ೪

ಮುನಿವೃದ್ಧವರ್ಯನ ಪುಲಸ್ತ್ಯನೊಂದೊಳ್ಮಾತು
ಬೆರಳೆತ್ತಿ ತೋರಿದಂತಾಗೆ, ಕಿಕ್ಕಿರಿದ ಜನ
ಸಂದಣಿಯೊಳಗೆ ನಿಂತು ನೋಡುತ್ತ ಕೇಳುತ್ತ
ಲಿದ್ದ ವಾಲ್ಮೀಕಿಯನ್ನರಸಿ ನೆರವಿಯ ಕಣ್ಣು

ಗಳು ಹಿಡಿದು ಕಟ್ಟಿದುವು—ಸೆಳೆಯಲ್ಕೆ ತೊಡಗಿದುವು.
ಮನವಿಲ್ಲದಿಹ ಮನದೊಳಾದರೂ ಮುಂಬರಿದು
ನುಡಿಯನಣಿಗಟ್ಟಿದನು—ಶಿಳಿವನೇ ಸೂಸಿದನು:— ೫

'ಈ ತೆಂಕನಾಡ ಹಿತ್ತಿಲಗಿಡುವಿನಲ್ಲಾವ
ಮದ್ದುಮೂಲಿಕೆಗಳನು ಕಂಡನೋ ನಮ್ಮಜ್ಜ
ನಾಂ ಕಂಡೆನಿಂತುಟೆಂಬಲ್ಲಾವನಂತಲ್ಲ
ವೆಂದು ಬೆರಳೆತ್ತಲಾಪನು? ಶಿರಂಬಾಗುವೆನು.
ಏನಾದರೊಂದವಾಂತರದವಗಡಂ ಸಂಗ
ಡಿಸಿದಲ್ಲಿ, ನೀಚನೊಬ್ಬಂ ಮೀರಿ ಕೈವೀಸಿ
ದಲ್ಲಿ, 'ಹಾ ಧರ್ಮವಿಂತಾದುದೇ! ಪೂರ್ವಕಾ
ಲದಸುಗ್ಗಿ ಕುಗ್ಗಿತೇ!' ಎಂದು ಕೋಳ್ಗುದಿಗೊಳ್ಳು
ತಿಂದಿನಂದದೆ ಕಳವಳಿಪುದೊಂದು ಬಳಕೆಯಾ
ಯ್ತುದರಿಂದಲೇ ನಮ್ಮ ಮಾನಸಂ ಸಂಸಾರ
ಸಾರವಹ ಧರ್ಮಕಾಸರೆಯಾಗದಿಪ್ಪುದೆಂ
ದೆನ್ನೆಣಿಕೆಯದರಿಂದ ಧರ್ಮಸ್ವರೂಪವಂ
ಪರಿಕಿಸುತ ನಡೆಯದಿಹುದೇ ರೋಗದಾಗರಂ.
ಈ ಪ್ರಪಂಚವನೆಲ್ಲವನು ಧರಿಸುತೊಂದು ನೆಲೆ
ಯಲ್ಲಿರಿಸಿ ಬೆಳಗಿಪುದೆ ಧರ್ಮಲಕ್ಷಣವೆಂದು
ಪುಸ್ತಕದೆ ಬಲ್ಲವರು ಬರೆದಿಟ್ಟ ಮಾತಾದು
ದದನೋದಿ ಕಲಿತಮಾತ್ರಕೆ ಧರ್ಮವಾದುದೇ?
ಮನದೊಳದು ಚಿಗುರಿ, ನುಡಿಯೊಳಗರಳಿ, ನಡೆಯಲ್ಲಿ
ಫಲಿಸಬೇಕೆಂದೆಂಬುದಾರ್ಯಸಮ್ಮತವಲ್ತೆ?
ಇದುವೆ ತಾಂ ವ್ಯಕ್ತಿಧರ್ಮಂ ಸಮಾಜದೊಳು ಹಾ
ಸಾಗಿ ಹೊಕ್ಕಾಗಿ ನಾಡಿನಲಿ ಬಲಿದರೆ ಧರ್ಮ
ವಾಗ ನಾಗಾಲೂರಿ ನೆಲೆಗೊಂಡು ನಿಲ್ಲುವುದು.
ಅಂತದಂ ಮೀರುವವನಾಳಾದರೇನರಸ
ನಾದರೇಂ? ತಾನೆ ಬಾಹಿರನಾಗದುಳಿವನೇ?

ಗಿಳಿಯೋದನುಗ್ಗಡಿಸಿ, ಪಂಡಿತಂಮನ್ಯತೆಯು
ಡಂಗುರಂ ಬಾರಿಸುತೆ, ದೊರೆತನದೆ ಬೀಗಿಬಿರಿ
ದಿಲ್ಲಿ ಬಿಂಗುರುಟಯಾಟಂಗುಣಿದ ರಾವಣಂ
ಧರ್ಮಸ್ವರೂಪವಂ ಚೈತನ್ಯಸಾರವಂ
ಕಂಡವನೆ? ಕನವರಿಸಿದವನೆ? ಕೈನಿಡಿದವನೆ?
ಮೇಣಿರುವೆಗಡಿಯುತಾನೆಯನದೇಂ ನೋಯಿಪನೆ?
ಶಮದಮತಪಂಗಳಲಿ ಪಳಗಿ, ವಾತಾಂಬುಪ
ರ್ಣಾಶನರೆನಿಸುತೆತ್ತಲೂ ನೆಗಳ್ತೆಯನಾಂತ
ಯೋಗಿವೇಷಂಗೊಂಡ ಕೆಲಬರೂ ಧರ್ಮಸ
ನ್ನಿಧಿಗೊಂಡು, ಕಾವ ಹಾವುಗಳಾಗಿ, ಹೆಡೆಯೆತ್ತಿ
ಬುಸುಗುಟ್ಟುತಿಪ್ಪುದಂ ಕಾಣೆವೇ? ಧರ್ಮವದ
ರಿಂದೆ ಕಂಗೆಟ್ಟುದೇ? ಕೆಡದು—ಕಿಂಕಿರಿಗೊಳದು!' ೬

ಹೊಸಮಾತಿದನ್ನಾಲಿಸುವರಂತರಂಗದೆ ತ
ರಂಗಂಗಳೇಳುತಿಳಿಯುತ್ತಿರಲು, ಬಗೆಗೊಂಡು
ತಾನದಂ ಹೊನಲೊಡನೆ ಹರಿಯಿಸಲುಬೇಕೆಂದು
ತಂಗಾಳಿಯಾದ ಸಾರಣೆನುಡಿಯನೆತ್ತಿದಂ:— ೭

'ಉತ್ತರಾಪಥದಾರ್ಯನಾಯಕನ—ಕೌಶಿಕನ
ಮಾತನೀ ಕ್ಷಾತ್ರಾನುಭಾವಂಗಳನ್ನೆಣಿಸೆ,
ಬಗೆಯಂಜುತಿದೆ! ನಮ್ಮ ವಿೂಸಲಾದಾರ್ಯಧ
ರ್ಮದ ಶಾಂತವರ್ತನೆಗೆ ಕಡೆಯದಿನವಡಸಿತೋ—
ರೌದ್ರ ಭೀಭತ್ಸಂಗಳೊಸರಲಿಹ ನಾಳ್ಪಗರ
ಣದ ಪೂರ್ವರಂಗಕ್ಕೆ ನಾಂದಿಯುಗ್ಗಡಿಸಿತೋ—
ಎಂಬಂತೆ ತೋರುತಿದೆ! ಪೂಜ್ಯಪೂಜಾವ್ಯತಿ
ಕ್ರಮುವನೆಸಗಿದನಿವಂ ಬೆಳ್ಳನೆಂದೆಣಿಸದಿರಿ.
ಕಾರ್ಯವೆಡೆಗೊಂಡಲ್ಲಿ ಕಂಡುದಂ ಕಂಡವೋ
ಲಾಡಬೇಕಲ್ಲದಾ ನಯದ, ನುಣ್ಪಿನ, ತಳ್ಕಿ

ನೌಪಚಾರಿಕದ ನುಡಿ ಸಲ್ಲದೆನ್ನುವರಲ್ತೆ?
ಅದರಿಂದಲೆನ್ನುವೆನು; ಮನವಿಟ್ಟು ಲಾಲಿಸುವು
ದುತ್ತರಾಪಥದಿ ನವಿಸ್ಮೆ ಕೈಕಸಾಸುತನ
ತುಳಿಲಾಳ್ಗಳೆಸಗುತಿಹ ಕಾಟವನು ಸೈಸಲಾ
ರದ ನಾಡವರ ಮರುಕವಂ ನಿವಾರಿಸಲೆಂದು
ಗಾಧಿರಾಜಾತ್ಮಭವನೀ ಮುನೀಶಂ ತನ್ನ
ಪೂರ್ವಾಶ್ರಮದ ರಾಜನೀತಿಯೊಳು ಕೈದುರುಕಿ,
ಹುಟ್ಟುಹಗೆಯಾಗಿಹ ವಸಿಷ್ಠನಲಿ ಕೆಳೆವಡೆದು,
ದಶರಥನ ಮಕ್ಕಳನಲೌಕಿಕಪರಾಕ್ರಮರ
ನಾ ರಾಮಲಕ್ಷ್ಮಣರೆನುವ ರಾಯಗುವರರಂ
ನಾಯಕರನೆಸಗಿ, ಗಾವಿಲರಾದ ರಕ್ಕಸರ
ಕುಲವನೇ ನಿರ್ನಾಮವಾಗಿಸುತಲಾರ್ಯರಾ
ಜಕದ ಕೋಟೆಯ ಬಲಿದು, ಕುಲಕೆ ಚಲಕಂತೆ ನೆಲ
ದಾಳ್ತನಕೆ ಕಳೆಗೂಡಬೇಕೆಂದು ಕೈಯೆತ್ತಿ
ನಿಂದಿರುವನದಕೆ ನಮ್ಮೆಲ್ಲರೊಪ್ಪುಗೆವಡೆಯೆ
ಬಂದಿರ್ಪನೀ ಗಾವಿಲಂ ರಾವಣಂ ವಿಧಿಯೆ
ಹಿಡಿದೆಳೆದು ತಂದಂತೆ ತನ್ನ ತಪ್ಪಿಗೆ ತಾನೆ
ಸಾಕ್ಷಿಯಾದನು. ಹೋಗಲದು; ಕಳವು ತುಬ್ಬಾಗೆ
ಬೇಸರಿಕೆಯೆನಗಿಲ್ಲವಿನ್ನೊಂದನಾಲಿಪುದು:
ವಸುಧೆಯೆ ಕುಟುಂಬವಾದಾರ್ಯಧರ್ಮಕ್ಕೆ ಪಾ
ಲಕರಾದ ಮುನಿಗಳೀ ಪರಿಯ ಮಮಕಾರಾದಿ
ಸಂಕುಚಿತ ಶೈಲಿಯನ್ನೊಂದಲೇನಲ್ಪ ಕವಿ
ಗಳ ಕಾವ್ಯಬಂಧದಂತದು ಮೂಸದಿರುವುದೇ?
ರಾವಣಂ ಕಡಲ ನಂಜಾದರೇನಾಕುಲಂ
ಸಾಮಾನ್ಯವೇ! ಬೊಮ್ಮನಿಂದೊಗೆದು ಕಳೆಗೊಂಡು
ದೀ ಪುಲಸ್ತ್ಯನೆ ಕುಲಕೆ ಪತಿ; ವಿಶ್ರವಸುವದ
ಕ್ಕಸುವೆನಿಪನಂತಲ್ಲಿ ಮಾಲ್ಯವಂತಂ ವಿಭೀ
ಷಣನೆ ಮೊದಲಾಗಿಪ್ಪ ಸಜ್ಜನಶಿರೋಮಣಿಗ

ಳನುಯಾಯಿವರ್ಗದೊಡನಿಹರಿಳೆಯ ಸತಿಯರನು
ಕೈವಿಡಿದು ನಡೆಯಿಸುವ ಮಾತೆ ಕೈಕಸೆ, ನೆಲದ
ಶೀಲಕ್ಕೆ ರನ್ನಗನ್ನಡಿಯೆನಿಪ ಮಂಡೋದ
ರೀದೇವಿ ಮೊದಲಾದ ಸಾಧ್ವಿಯರಿಗದು ಬೀಡು;
ತಾನೆಲ್ಲವಂ ವಿಚಾರಿಸದೆ, ಮನೆಯೊಳು ಹಾವು
ನುಸುಳಿ ನೆಲೆವಡೆದುದೆನ್ನುತ ಕಿಚ್ಚನೊಟ್ಟಿದರೆ
ಹಿಟ್ಟುಬೂದಿಯನೊಟ್ಟು ಗೂಡಿದಂತಾಗದೇ?
ದಶಮುಖಂ ಶತಮೂರ್ಖನಹುದದಂ ನೆವವಿಟ್ಟು
ರಕ್ಕಸರ ಕುಲವೆಲ್ಲವಂ ಕೊಲಲ್ಕೆಣಿಸಿದರೆ
ನಮ್ಮಣ್ಣರೋದು 'ವೃಂತಾಕಂ ನ ಭಕ್ಷಯೇ
ದೆ'ಂಬುದಕೆ ಟಿಪ್ಪಣಂ ಬರೆದಾತನೋದಿನಂ
ದದೊಳೇ ಸಹಸ್ರಮೂರ್ಖತೆಯೆನಿಸದಿಪ್ಪುದೇ?
ಸಾಮಾನ್ಯಳೇ ವೇದವತಿ—ಪುಣ್ಯವತಿ! ನಮ್ಮ
ಧರ್ಮಸಾರವ ಹೀರಿದಾಕೆಯೆನ್ನುವೆನಂತು
ರಾವಣಂ ಕೈಮೀರಲಬಲೆಯೇಕಾಕಿನಿಯ
ಮಾನಸದೊಳಂಜಿಕೆ ನುಸುಳ್ದುದೇ? ಮುಯ್ಗೆಮು
ಯ್ಯೆಣಿಕೆ ತಲೆದೋರಿತೇ? ಭಾಪು! ಭೂಮಾತೆಯವ
ತಾರಂಬಡೆದ ಮಗಳೆ ಭಾಪು! ಹೆಂಗಳ ಶಿರೋ
ಮಣಿ ಭಾಪು! ಧರ್ಮಸಾರವನಮೃತವಂ ಖಳನ
ಕಲ್ಲೆದೆಯೊಳೂ ಸುರಿದೆ—ನೆಲದೆದೆಯನಲುಗಿಸಿದೆ!
ಪಿಂಡಾಂಡದೆಲ್ಲೆಯನ್ನಳಿಯಿಸುತ ಬೊಮ್ಮಾಂಡ
ದಲಿ ತುಂಬಿತುಳುಕಿ ರಿಂಗಣಗುಣಿದು ವಿಶ್ವಾತ್ಮ
ವಡೆದು ಹರಿಯುವ ಮಹಾಚೈತನ್ಯಸಾಗರದೊ
ಳೊಂದಾಗಿ ಹೊನಲುಕ್ಕುತಿಹ ಪುಣ್ಯವಾಹಿನಿಯೆ—
ನಿನ್ನ ಹೆಸರೆತ್ತಿ ಬಾಳ್ಕೆಗೆ ಕೆಸರ್ಮೆತ್ತುವುದೆ?' ೮

ಎಂಬಲ್ಲಿ ಮುನಿಯ ನುಡಿಯುಡುಗಿತ್ತು. ನಿಂದಲ್ಲೆ
ನಿಂದು ಮರವೆಯನಾನೆ ನೆಡುಗಂಗಳೊಡನೆ ಮೂ

ಗಂ ನಾಟಲೊಂದೆರಡು ನಿಮಿಷವೆಲ್ಲವರ ಕ
ಣ್ಣೊಡನೆ ಸಂಗಮಿಸಿ, ನೆಲೆನಿಂದ ಕಡಲಂತಾಗಿ,
ಬಳಿಕ ನುಡಿಯಲೆಗಳಂ ನಸುನಗುತ ಬೀರಿದನು:— ೯

‘ಆ ಬಗೆಯದಂತಿರಲಿ; ಧರ್ಮಸಾರವನುಂಡ
ನಮ್ಮ ಬನವಸೆಯ ಚಿಂತಾರತ್ನವೆಂದೆನಿಪ
ವೇದವತಿಯಾ ರಕ್ಕಸಂಗೆ ಬೋಧಾಮೃತವ
ನಂತು ಸೂಸಿರಲದಂ ಸವಿದು ಮೈವಡೆವನೋ,
ಮೇಣುಗುಳಿ ರೋಗಿಷ್ಠನಪ್ಪನೋ—ಎಂಬುದನು
ಭಾವಿಸದೆ ವಿಸಟಂಬರಿಯೆ, ನಾವೆ ಧರ್ಮಕ್ಕೆ
ಕೊಡಲಿಗೊಂಡಂತಾಗದೇ? ತಾನದೆಲ್ಲವ
ನ್ನೆಣಿಸುತ್ತಗಸ್ತ್ಯನೆಂದಂತಾರ್ಯರಾಕ್ಷಸೋ
ಭಯಸಮಾಜಕ್ಕೆ ಗುರುವಾಗಿಹ ಪುಲಸ್ತ್ಯನನೆ
ನಾಯಕಂ ಮಾಡುತ್ತ, ಧರ್ಮಮಾರ್ಗದ ಗುರಿಯ
ಹಿಡಿಯಬೇಕೀ ಕಜ್ಜಕೆನ್ನನ್ನರಂ ಮುಂದು
ಮಾಡಲಾಗದು; ಬೇಡುವೆನು—ಬೇರನೆತ್ತಿ ಕೊಡಿ
ಯಂ ನೆಟ್ಟು ಬೆಳೆಯಿಸಲು ಕೈನೀಡಲಾಗದಾ
ಗದು; ಮನಂ ಮೆಚ್ಚಿದಂದದಿ ಕಂಡುದಂ ಕಂಡ
ತೆರದೊಳಿದ್ದುದನಿದ್ದ ವೋಲು ಬಿನ್ನಯಿಸಿದೆನು.’ ೧೦

ವಾಲ್ಮೀಕಿಮುನಿಯೆಂದ ನುಡಿಯಕ್ಕರಂದಪ್ಪ
ದಡಿಯಿಂದೆ ಮುಡಿಯ ವರೆಗಾ ನೆರವಿಯಂತರದಿ
ಪಡಿಯಚ್ಚುಗೊಂಡುದೆಲ್ಲರು ಮೌನಮುದ್ರೆಯ
ನ್ನೊಡೆಯಲೊಲ್ಲದಿರಲ್ಕೆ ಬಗೆಯುತ್ತ ನಯವಿದಂ
ಗಾಧಿಸುತನೇಂ ಮನಂ ನೊಂದನೆ? ಮೊಗಂ ಮುರಿದ
ನೇ? ಗುರಿಯು ಮೆಯ್ಯೊಳೇ ಕಣ್ಣಿಟ್ಟನಾ ಮದ್ದು
ಗುಟಿಕೆಯಂ ನುಂಗಿ ನಸುನಕ್ಕ ರೋಗಿಯವೋಲು
ಮೊಗವೆತ್ತಿ ನೋಡಿ ನಲ್ನುಡಿಗಳಂ ಸೂಸಿದನು:— ೧೧

'ಭಾಪುರೇ ವಾಲ್ಮೀಕಿ! ನೀನೆಂದುದೆಲ್ಲವೆನ
ಗೊಪ್ಪುದುದೆಂದೆನ್ನೆನಾದರೇನೊಂದು ಹೊಸ
ದಾರಿಯಂ ತ್ರಿಕರಣಕ್ಕನುವಾಗಿ ಕಂಡವನು
ಕಂಡುದಂ ಕಂಡತೆರದಿಂದೆ ಕಾಣಿಸುವಾತ
ನೆಂಬುದನ್ನರಿತು ಸಂತಸಗೊಂಡೆನಯ್ಯ! ಮತ
ಭೇದವಿನಿತನಿತಿದ್ದರೇಂ? ಮಾರ್ಗಭೇದಕೆಡೆ
ಯಿಲ್ಲವೈ! ನೀನೆಂದ ಮಾಳ್ಕೆಯಿಂದೀ ರಾವ
ಣನ ಕಾಟವನ್ನೆಂತುಟಾದರೂ ಪರಿಹರಿಸ
ಬೇಕಾರ್ಯರೂ ಜೀವಿಸಲು ಬೇಹುದೆಂದು ಹವ
ಣಿಸುತಿಪ್ಪೆನಹುದು. ಸಂಸ್ಕೃತಿಯ ಸಾರವನಿಳೆಗೆ
ಸೂಸಬೇಕೆಂಬುದೇ ಗುರಿಯಲ್ಲದಿನ್ನಿಲ್ಲ.
ಇದಕಾಗಿ ಕೈದುಡುಕುವಾ ಮುನ್ನ, ದಕ್ಷಿಣಾ
ಪಥದ ಹಿರಿಯರೊಳೆಣಿಸಬೇಕೆಂದು ಬಂದು ಮಾ
ತಿನ ಶಾಂತಿಕರ್ಮದಲಿ ಭೇತಾಳನಂ ಕಂಡ
ರೇನಿಂತುಟಪ್ಪ ಭೇತಾಳಂಗಳೆನಿತನೋ
ಕಂಡಿಹೆನು—ಕಟ್ಟ ಕಲ್ಲೊಳಗೆ ನೆಲೆಗೊಳಿಸಿಹೆನು.
ಮಾತದಂತಿರಲಿಲ್ಲಿಗೆಯ್ದಿ ಬಾರದ ಬನ್ನ
ವಂ ಕಂಡರೂ, ತೆಂಕನಾಡಿನೊಳ್ದಿರುಳಾದ
ನಿನ್ನಂತರಂಗಸಾರವ ಸವಿದು ಸಂತಸಂ
ಗೊಂಡೆನೆನ್ನಯ ಶಾಸ್ತ್ರತತ್ತ್ವವದು ಕಟುವೆನಿಸಿ
ತೋರಬಹುದೀ ನಿನ್ನ ನುಡಿ ಕಾವ್ಯಸಾರವಂ
ಸೂಸುತಿನಿದಾಗಿಪ್ಪುದಾದರೇನೆರಡು ಕಾ
ಲೊಂದೆ ನಡೆ ಎಂಬುದಂ ಬಗೆಗೊಳ್ಳಬೇಕಯ್ಯ!
ಹಿರಿಯಂ ಪುಲಸ್ತ್ಯನೆಂದಂತೆ ನೀನಾರ್ಯನಾ
ಯಕನಾಗಿ ಲಂಕೆಗೆಯ್ದುತ್ತ ರಾವಣನಂತ
ರಂಗವಂ ಪರಿವರ್ತಿಸುವ, ಮೇಣ್ವಿಭೀಷಣಾ
ದಿಗಳೆಣಿಕೆಯಂ ಬಲಿದು ಕಳೆಗೊಡುವ ಧರ್ಮಕಾ
ರ್ಯಕ್ಕೆ ಕೈಗೊಡು; ಕುಲವಿಭೇದಭಾವವನೆ ಹರ

ಡುತ್ತಲಿಃ ಕೌಶಿಕಂ ಕೂಗುತಿಹನೆಂದೆಣಿಸ
ಬೇಡ, ಬೇಡೊಳಗವಲ ತೊರೆವುದೇ, ನೀತಿಯಂ
ಮೆರೆವುದೇ ಧರ್ಮಕ್ಕೆ ಮೂಲಮಂತ್ರವಿದಲ್ತೆ!' ೧೨

ಆ ಮಾತಿಗೆಲ್ಲರೊಂದೇ ಕೊರಲೊಳಸ್ತುವೆಂ
ದರು. ಮುಂದೆ ಮರುಮಾತಿಗೆಡೆಯಿಲ್ಲದಾಯ್ತು. ವಾ
ಲ್ಮೀಕಿ ನಾಯಕನಾದನಾ ವೇದವತಿಯೊಂದು
ಮಸಣವೇ ಮಂಗಳದ ಮನೆಯಾಗಿ ರಂಜಿಸಿತು!
ಸಾವಿನೊಳು ಹುಟ್ಟರಳಿ ಪರಿಮಳಿಸಬೇಕೆನ್ನ
ವಾರ್ಯಧರ್ಮದ ಮೊಗಕಮಂಗಲಂ ಮೆತ್ತುವುದೆ? ೧೩

---

## ನಾಲ್ಕನೆಯ ಖಂಡ

ಹಾವು ಕಚ್ಚಿದ ಬಾಯಿ ಬರಿಬಾಯಿಯಾಗೆ, ಹೆಡೆ
ಯುಡುಗಿದುದು; ರಕ್ಕಸಂ ಮೊಗಗುಂದಿದಂ; ಬಿಲಂ
ಬೊಗುವಂತೆ ಲಂಕೆಯರಮನೆವೊಕ್ಕು, ಬೇವಸದೊ
ಳಾರಿಗೂ ಮೊಗದೋರದೋಲಗಕ್ಕಡಿಯಿಡದೆ
ನೇಹಿಗರ, ಮನ್ನೆಯರ, ಸಾವಂತಮಂತ್ರಿಗಳ,
ಗುರುಜನಂಗಳ, ಹಿರಿಯರಾಲಾಪಕೆಡೆಗೊಡದೆ
ಕೆಲದಿನಂಗಳೆದನಚ್ಚರಿಯ ಪೊಸಬಾಳ್ತೆಯಿಂ
ತೇನೇತರಿಂದೆಂದು ನಂಬುಗೆಯ ಕುಲವೃದ್ಧ
ರಾರೂ ತಿಳಿಯರೆನಲ್ಕನ್ನಿಗರ ಮಾತೇಕೆ?
ಕಿವಿಯೆ ಕಣ್ಣಾಗಿ ದಿನಕೊಂದೊಂದರಂತೆ ಹೊಸ
ಹೊಸ ಚಿತ್ರಗಳ ಕಾಣುತಿದ್ದರಾ ಚಿತ್ರಗಳ
ನೊಳಗೊಳಗೆ ಮನಗೊಂಡು, ಮನೆಮನೆಗಳೊಳಗೆ ಬಿ
ತ್ತರಿಸುತ್ತ, ಕೆಳೆಯರೊಡನರುಹುತ್ತ, ಪುರದಲ್ಲಿ
ಗೊಣಗುತ್ತಲೂರು ಕಾಲೂರುಗಳೊಳರಳಿಸಲು
ಗುಟ್ಟಾಗಿ ಸುದ್ದಿಯದು ದಶದಿಕ್ಕುಗಳಲಿ ದಶ
ಮುಖವಾಗಿ ಹಬ್ಬೆ, ರಾವಣನೆ ದಶಮುಖನೆಂದು
ಹೆಸರಾಂತನೆಂಬೆನೇ! ಬಣ್ಣನೆಯದಂತಿರಲಿ. ೧

ವಾಲ್ಮೀಕಿಯಾ ಪುಲಸ್ತ್ಯಂಬೆರೆದು ಲಂಕೆಗೆ
ಯ್ದಿದನಲ್ಲಿ ವಿಶ್ರವಸುವಂ ಕಂಡು ಸುದ್ದಿಯ
ನ್ನರುಹುತ್ತ, ಮಾಲ್ಯವಂತನ ಮನಕ್ಕೆರೆದು ಗುರಿ

ಗಾಣಿಸುತ, ಸಜ್ಜನಶಿರೋಮಣಿ ವಿಭೀಷಣನ
ಬಗೆಯನೊಳಕೊಂಡು, ಮಾರೀಚನಂತರವರಿದು,
ರಾವಣನನೀಕ್ಷಿಸಲು ಬೇಕೆಂದು ನಿರ್ಧರಿಸಿ,
ಬಳಿಯಟ್ಟಲರಿದವಂ ಬಂದು ಬಿನ್ನಯಿಸಿದನು:— ೨

'ಕೆಲದಿನಗಳಿಂದೋಲಗಂಗೊಳ್ಳದೇಕಾಂತ
ಭವನದೊಳಗಿದ್ದರಸನಿಂದು ಪುಷ್ಪಕವೇರಿ
ಸರಿದಂ ಪ್ರಹಸ್ತನೊಡನೆಲ್ಲಿಗೇಕೇನೆನು
ತ್ತರಿಯೆನೆಂ'ದೆನಲು, ಮಾರೀಚನಾಲಿಸುತ ಹುಂ
ಗುಟ್ಟಿದಂ; ತಲೆಯನೊಲೆಯುತ್ತ ನುಡಿದಂ: 'ರಾಯ
ನೆದೆಗಡಿದ ಮಂಕು ಮರುಳೆದ್ದುದೆಂಬಂದದಲಿ
ತೋರುತಿದೆ. ಮಿಥಿಲೆಯಲಿ ನಡೆಯಲಿಹ ಸೀತಾಸ್ವ
ಯಂವರೋತ್ಸವದೋಲೆ ಬಂದಿಹುದೆನುತ್ತ, ಸಚಿ
ವಂ ನುಡಿದ ಮಾತು ನೆನಪಾದುದೆನಗಲ್ಲಿಗೇ
ಪೋಗಿರಲು ಬೇಹುದೆಂ'ದೆನಲೆಲ್ಲರೂ ಬಗೆದು,
ಮುಂಗಜ್ಜವಂ ಹೆಣೆದು, ಹೊಳಲೊಳಲ್ಲಲ್ಲಿಗೆ
ಯ್ದುತ, ಪೌರವೃದ್ಧರೊಲವಂ ಪಡೆದು, ಧರ್ಮಸ್ವ
ರೂಪವನು ಬೋಧಿಸಲು, ನಡೆಯಲ್ಲಿ ಪೋಣಿಸಲು,
ನಾಡೊಳಗೆ ಹರಡಿಸಲು ಕಂಕಣಂಗಟ್ಟಿದರು. ೩

ಈ ಹಗರಣದ ಪೂರ್ವರಂಗದೊಳೆ ತೊಳತೊಳಲಿ
ಸಾಕಾದುದಿನ್ನೊಂದು ಜವನಿಕೆಯನೆತ್ತುವವ
ಸರವಾಯ್ತುದೋ ಕಣ್ಗೆ ಕಾಣಿಕೆಯನೀವುದಾ
ಜನಕರಾಜನ ರಾಜಧಾನಿ. ಲೋಕದ ಕಣ್ಮ
ನಂಗಳಿಗೆ ಗರಿಮೂಡಿಸಿತ್ತು; ರೆಕ್ಕೆಗಳಂ ಕೆ
ದರ್ವಂತೆ ಹುರುಪೇರಿಸಿತ್ತವನ ಜಾಣ್ಮೆ ತಾ
ನೆದೆಯೊಳಗೆ ಬಿತ್ತಾಗಿ, ಕೊರಳಲ್ಲಿ ಬೆದೆಯೆನಿಸಿ,
ನಾಲಗೆಯೊಳಗೆವಡೆದು, ತುಟಿಯಲ್ಲಿ ಮುಗುಳೊಂದಿ,

ಕಲ್ಯಾಣಮಂಡಪದೊಳರಳಿ, ಪಸರಿಸುತಲೆ
ತ್ರೈತ್ರಂ ವಿದೇಹಚಾತುರ್ಯವನೆ ನನ್ನಿಗೆ
ಯ್ಯುತ ಹಬ್ಬುತಿರಲಾ ಮಹಾರಾಜನಂತರಂ
ಗದಿ ಸಮರಸಂಬಡೆದ ಶೀಲವೇ ಸೀತೆಯೆಂ
ಬಣುಗಿಯಾಕಾರದಿಂ ಮೈಗೊಂಡುದೆನಲವಳ
ಸೌಂದರ್ಯದಡಿವಿಡಿದು ಮುಡಿಯವರೆಗನುಭಾವ
ವಿಡಿದು ಭಾವದವರೆಗೆ ಬಣ್ಣಿಸುವ ಭಾಷೆಗ
ಕ್ಕರಗಳಿಲ್ಲೆಂಬೆನಾಂ! ಬಣ್ಣಿಸುವೆನೆಂದೆಂಬ
ಕವಿಯ ಬಾಯ್ ಗವಿಯ ಬಾಯೆಂದೊಬ್ಬ ಭಾವುಕಂ
ಸಾರಲಿನ್ನೊಬ್ಬನಿಂತಾಡಿದಂ: 'ನಲ್ಗೆಳೆಯ,
ಕೇಳೆನ್ನ ನುಡಿಯನೇಂ ಬಣ್ಣನೆಗೆ ಹೊರಗಾದ
ವಸ್ತುವೆಂಬುದು ಲೋಕದೊಳಗುಂಟೆ? ಭಾವಿಸಲು
ಸೀತೆ ಜನಕನ ಧರ್ಮಸಂಸ್ಕೃತಿಯ ಪಕ್ವಫಲ
ವೀ ಮಂಡಪಂ ಮಿರುಪ ಹೊಂಬಟ್ಟಲೊಲಿದು ಪಿಡಿ
ವಾ ಕೆಯ್ಯನಾರಾಮುಕರವೆಂದು ಬಣ್ಣಿಸುವೆ
ನೆ'ಂಬುದಂ ಕೇಳಿಬೆರಗಾದೆನಾಂ ಮನಗೊಂಡು! ೪

ಅನಿತರಲಿ ಸಂದಣಿಗೊಳುತ ರಾಯಗುವರರೊ
ಡ್ಡೈಯ್ತುರುತಲಿದ್ದುದಾನೆಯ ಮೇಲೆ ವಾರುವದ
ಮೇಲೆ ತೇರಿನ ಮೇಲೆ ಸಿರಿಮುಡಿತುರಾಯಿಗಳ
ನಸುನಗೆಗೆ ಕೈಗೊಡುವ ಕಡೆಗಣ್ಣ ಹೊಳಹುಗಳ
ಚೆಲುವಚ್ಚುಗೊಂಡ ತರತರವಾದ ಬಾವುಟಂ
ಗಳ ಪರಿಜನಂಬೆರೆದು, ನಾಡ ಸೌಂದರ್ಯಂಗ
ಳೆಲ್ಲವನ್ನೇಂ ಸಂತೆಗೊಯ್ವರೆಂಬಂದದಿಂ
ಸಾಲ್ವಿಡಿದು ಮಿಥಿಲೆಗೆಯ್ದುತ್ತಿರಲ್ಕಾ ನೆರವಿ,
ಅಲ್ಲಿ ಹರಿಕಾರರಲ್ಲಲ್ಲಿ ಕಟ್ಟಿಗೆಕಾರ
ರಲ್ಲಿ ಮನ್ನಣೆಗಾರರಲ್ಲಲ್ಲಿ ಸನ್ನಣಂ
ಗಾರರಿಲ್ಲದುದಿಲ್ಲ, ಸಮಯಕೊದಗದುದಿಲ್ಲ,

ಸವಿಗೆ ಹೊಲ್ಲದುದಿಲ್ಲವಲ್ಲಸಲ್ಲದುದಿಲ್ಲ
ವೆಂಬವೋಲಾಯ್ತು; ಸುರತರು ಕರಂ ನೀಡಿತ್ತು.
ಸುರಧೇನು ಕಾಮಿತಂಗರೆದುದೆಂಬಂತಿರಲು,
ನಾಡುನಾಡುಗಳರಸರಿಂ ತುಂಬಿತುಳುಕುತಿಹ
ಬೀಡುಬೀಡುಗಳ ನಾಲಗೆಯೋಲಗಿಸುವಲ್ಲಿ,
ನಟ್ಟನಡುವಣ ಹಚ್ಚಹಂದರಂ ಸತ್ಕಲಾ
ಸುಂದರಂ ಸಿರಿಯೊಲ್ದ ಮಂದಿರಂ ಮಿರುಗಿತ್ತು! ೫

ಹಗಲ ಬೆಳ್ಪನ್ನೊರಸೆ, ಸಂಜೆ ರಾಗಂ ಬಳಿಯ
ಲಿರುಳ ಕಾಂಗಿನ ಸೀರೆಯುಡೆ ಮೆಯ್ಯೊಳೊಪ್ಪಲ
ಲ್ಲಲ್ಲಿ ಕೆಂಜೊಡರ ಗುಡಿ ಮಾಣಿಕದ ತೊಡವಾಗಿ
ಮಿನುಮಿನುಗೆ, ರಾಜಧಾನಿಯ ಮೊಗಂ ಬೆಳಗಿದುದು.
ಭೋಜನಾದ್ಯುಪಚಾರವಂ ತೀರ್ಚಿ, ಬೀಡುಗಳ
ವಾಡಂಗಳಲ್ಲಿ ತಂಗಾಳಿಯೋಲಗವಡೆಯು
ತಿಪ್ಪರಸುಮಕ್ಕಳೆದೆದುಂಬಿರುವ ಕಾದಲ್ಮೆ
ಕಾಯ್ದು, ಕುದಿಕುದಿದು, ಭಾವದಲಿ ಹವೆಯಾಗಿ ಹಾ
ರುತ್ತ ಬೆಳ್ಮುಗಿಲಾದುದನುಭಾವದಲಿ ಸೋನೆ
ಯಾಗಿ, ಮಾತಿನಲಿ ಬಿಂದುಗಳಾಗಿ ನೆಗೆದು ನ
ಕ್ಷತ್ರುಂಗಳಾಗೆ, ಬಾಂದಳದಿ ತಮ್ಮಂತರದ
ಚಿತ್ರವಂ ಬರೆದು, ಬಿದಿಯಿಟ್ಟು ತೋರುವನೆಂಬ
ತತ್ತ್ವವನ್ನರಸುತರಮಕ್ಕಳಾಗಸವನೀ
ಕ್ಷಿಪರೊಮ್ಮೆ; ತಮ್ಮಂತರಂಗವಂ ಮೇಣೊಮ್ಮೆ
ನೋಡುವರು; ಹೋಲುವೆಯನರಿತೆಮ್ಮ ಮಾನಸಂ
ಬಾನೊಳಗೆ ಬರೆದ ಚಿತ್ರದ ಬಾಳ್ಕೆಗೊಂಡುದೇ!
ಎಂದು ಭಾವಿಸುವಲ್ಲಿ ಮೆಲ್ಲಮೆಲ್ಲನೆ ಚಂದ್ರ
ಮಂ ಮೂಡಿ, ಹೆಜ್ಜೊಡರನಣಿಗೊಳಿಸೆ, ಹರಡಿ ಹ
ಬ್ಬಿದ ಬೆಳ್ಮುಗಿಲು ವಿತಾನಂಗಟ್ಟಲಂಬರಂ
ಹಂದರದ ಜೊಂಪದಾ ಮೇಲಂತರದ ಚಪ್ಪ

ರಂ ಬಲಿದುದೆಂದೆನಿಸಿ ಮಿನುಮಿನುಗುತಿರುವಲ್ಲಿ —
ಕಣ್ಣೊಳೇ ಬೆಳಗಾಯ್ತು. ಕೋಳಿ ಕೋಯೆಂಬ ದನಿ
ಕಿವಿಯೇಣಿಯಲ್ಲಂತರಂಗದೊಳಗಿಳಿದತ್ತು. ೬

ಮರುದಿನಂ ಕಣ್ಣೊರಸೆ ನಿದ್ದೆಗೆಟ್ಟರಸುಮ
ಕ್ಕಳ ಮೋರೆ ಬಯಲಾಟಗುಣಿದು ಪೋದಾ ರಂಗ
ಕೆಣೆಯಾಗಿ ತೋರಿದುದು. ಮುಖಮಜ್ಜನಾದಿಗಳ
ನನುಗೊಳಿಸುತಿರುಳ ಸೆರೆವಿಟ್ಟರೂ ಬಿಡದಂತೆ
ತಂತಮ್ಮ ಶಿಬಿರಗಳ ಗುಡುಸಿನೊಳಸುಳಿಯುತಿರೆ,
ಹೊಲಬರಿಯದೊಬ್ಬ ಚಾರಂ ಸುಳಿದು, ರಾವಣನ
ಬೀಡಾವುದೆಂದು ಕೇಳುತ್ತ ಬರಲೆಲ್ಲರೂ
ತಾವರಿಯೆವಾವರಿಯೆವೆನಲು, ಖೇದಂಬಡೆದು,
ಕಾಡಿನೊಳು ಕಣ್ಗಟ್ಟಬಿಟ್ಟಾತನಂತಾದ
ನವನ ಗುರಿವಿಡಿದರಿಯುತಲ್ಲಲ್ಲಿಯಲೆದಾಡು
ತಿದ್ದ ನಾಡಾಡಿಯೊಬ್ಬಂ ಸನ್ನೆಗೆಯ್ಯುತೊಡ
ಗೊಂಡು ಕಣ್ಮರೆಯಾದನೇತಕೇನಿದರೊಳ
ಚ್ಚರಿ ನೋಡಬೇಕೆಂದು ಕವಿಮನಂ ಬೆಂಬಿಡಿಯೆ,
ರಾಜಧಾನಿಯ ನೆರೆಯ ನಿರ್ಜನಾರಣ್ಯಕವ
ರೊಡನೆಯ್ದುವಲ್ಲಿ, ಕೆಲದೂರದಲಿ ಬಾಂದಳಂ
ದಿರಿವ ಪುಷ್ಪಕವಿಳಿದು ಬಂದು ನೆಲಮುಟ್ಟಿದುದು! ೭

ನೆಲೆನಿಂದ ಪಾರಿನೊಳಗಡೆಯಿಂದ ಮಂತ್ರಿಯೊಡ
ನಿಳಿದ ತನ್ನಡಿಗೆ ಭಯಭಕ್ತಿಯಿಂದೆರಗಿದಾ
ತನ್ನವರನೀಕ್ಷಿಸುತ, ರಾವಣಂ ಕೇಳ್ದನೇ
ನಿಕ್ಕಡೆಗೆ ಮೀಸಲಾಗಿಹ ಬೇಹಿಗರು ನೀಂಗ
ಳೊಗ್ಗಾಗಿಬಂದಿರೇಕೆಂದು ಕೇಳಲ್ಕವರೊ
ಳೊರ್ವನೆಂದಂ: 'ದೇವ ಲಾಲಿಸೀತಂ ಸ್ವಯಂ
ವರಕಾಗಿ ನೆರೆದರಸುಗುವರರಾ ಬೀಡುಗಳ

ನಡುವೆ ನಿಮ್ಮಾ ವಾಸವಾವುದೆಂದರಸುತ್ತ
ಲಿರಲರಿತು ಕರತಂದೆನೆ'ಂದು ಬಿನ್ನವಿಸಿದನು. ೮

ಬಗೆಗೊಂಡು ನಸುಮುನಿಸು ಕಣ್ಣಕಡೆಯೊಳಗೊಸರೆ,
ರಕ್ಕಸಂ ನುಡಿದನೇನ್ಯೆ! ಮಯಾದಿಗಳೆನ್ನ
ನೆಲೆಯನರಿಯರೆ! ರಾಜನೀತಿಯನ್ನಿಂತು ಸಂ
ತೆಗೆ ಮಾರಲಟ್ಟದರೆ! ಆರಾದರೇನಾಳು
ಹೋದಲ್ಲಿ ಹಾಳೆಂದು ನೀಕರಿಸಲಡಿಗೆರಗಿ
ಬಿನ್ನಯಿಸಿದಂ: ದೇವ, ಕಿನಿಸಾಗಲೆಡೆಯಿಲ್ಲ
ವಾಮಯಾದಿಗಳೆಲ್ಲ ದಿಗಿಲಾಂತು ಸೂಚಿಸಲು
ಮರೆದರೆಂದೆಣಿಪೆನೆನೆ ನುಡಿದನಾ ಮಾತಿರಲಿ;
ಸಾರಣಾ ದಿಗಿಲಿಗೇಂ ಕಾರಣಂ? ಮುನಿಯೆಂದು
ಮನ್ನಿಸಲು, ಕೌಶಿಕನ ಕಾಟವೇನೆಲ್ಲೆಯಂ
ಮೀರಿತೇ? ಬಿಸಿಗೊಳದೆ ಬೆಣ್ಣೆಯೂ ಕರಗದೆಂ
ದೆಂಬರಲ್ತೇ? ಪೇಳೆನಲ್ಕೆ ವಿಸ್ತರಿಸಿದಂ:— ೯

'ರಾಕ್ಷಸಾಧಿಪ ಕೇಳು! ಮುನಿಮೂರ್ಖನವನ ನಡ
ವಳಿ ಹೊಸದೆ? ಗಂಟೆಗೊಂದೇಸರಂ. ತನ್ನ ನೆಡು
ವಗೆ ವಸಿಷ್ಠನ ನೆರಂಬಡೆದು, ದಶರಥನ ಮನ
ವನ್ನೊಲಿಸಿ, ರಾಮಲಕ್ಷ್ಮಣರನೊಡಗೊಂಡೆಯ್ದಿ
ನಮ್ಮುತ್ತರಾವನಿಯೊಳುಕ್ಕಡದ ಕಾಪಾದ
ತಾಟಕೆಸುಬಾಹುಗಳನಾ ರಾಮನೊಂದೊಂದು
ಸರಳಿಂದ ಕೋಳಿಯಂ ಕೊರೆವಂತೆ, ಕೊಯ್ಗುರಿಯ
ನರಿವಂತೆ, ಕುಸುರಿದರಿಯಿಸಿದನಾ ಮೇಲಾದು
ದಂ ಕೇಳು! ರಾಘವಂ ಮಲೆದ ಮಾರೀಚನ
ನ್ನೊಂದು ಪಾರುಂಗೋಲಿನೊಳು ಕೋದು ಕಟ್ಟದಂ!

ಬಿರುಗಾಳಿಯೊಳು ತೆಂಕವೆಸೆಗೆ ತಳ್ಳಿದನಾಗ
ಲಕ್ಷ್ಮಣನೆನುವ ಪೋರನೆಲವೆಲವೊ ಮಾರೀಚ!
ತನ್ನ ಬೆನ್ನಿಗೆ ಕಣ್ಣದೇಕೆಂದು ಹೆಕ್ಕಳಿಪ
ರಾವಣಂಗೀ ಬವಣೆಯಂ ಪೇಳ್ವುದಿನ್ನು ಮರೆ
ದಾದರೂ ಬಡಗಲಿಗೆ ತಲೆಯಿಕ್ಕಿ ಮಲಗಬೇ
ಡೆಂದರುಹಿ ಜಡಿದ ನುಡಿಯಿಂದಿಗೂ ಕಿವಿಯಲ್ಲಿ
ಮಿಡುಮಿಡುಕುತಿದೆ! ಮತ್ತೆ ಗಾಳಿಗಂಟಾದ ಮಾ
ವನ ಬವಣೆಯೆಂತಾಯ್ತೊ—ಬಲ್ಲರಾರದನೆಲ್ಲ!
ಉತ್ತರಾಪಥದ ಮಾತಂತಿರಲಿ; ದಕ್ಷಿಣಾ
ಪಥದ ರಕ್ಕಸರ ನೆಲೆಯಾಳಿಕೆಯ ಬೇರನೂ
ಕಿತ್ತು ನೇಸರಿಗಾರತಿಯನೆತ್ತಬೇಕೆಂದು
ಕಂಕಣಂಗಟ್ಟಿದಾ ಕೌಶಿಕಂ ತೆಂಕನಾ
ಡಿಗೆ ಸರಿದನಂತೆ! ನಿನ್ನಿಂ ವೇದವತಿಗಲ್ಲಿ
ಬನ್ನವಾಯ್ತೆಂತದನೆ ನೆವವೆಸಗುತಾರ್ಯರಂ
ಹುರಿದುಂಬಿಸುತ, ನಾಡವರನೆಲ್ಲ ಕೆದರಿಸುವ
ಕಜ್ಜಕ್ಕೆ ವಾಲ್ಮೀಕಿಯಂ ನೇಮಿಸುತ್ತ ಬಂ
ದಿಹನಂತೆ! ಬಳಿಕಲೀ ಬಡಗನಾಡಿನಲಿ ರ
ಕ್ಕಸರಾಳಿಕೆಯೊಳೊಡಂಬಟ್ಟದ್ದ ಕೋಟೆಕೊ
ತ್ತಳವೆಲ್ಲವೂ ದಿನಕ್ಕೊಂದೆರಡರಂತೆ ರಾ
ಮನ ಲಕ್ಷ್ಮಣನ ಸರಳುಗಳಿಗೆ ತುತ್ತಾಗಿ ಪೋ
ಗುತ್ತಲಿವೆ! ತಾನಿಂದೊ, ನಾಳೆಯೋ, ರಾಘವನ
ನೀ ಮಿಥಿಲೆಗೊಡಗೊಂಡು ಬಂದು, ಸೀತಾವಿವಾ
ಹವನವಂಗಾಗಿಸುತ, ಜನಕದಶರಥರ ಹಿಂ
ದಣ ಕೆಳೆಯ ಹೊಸಯಿಸುತ್ತಾರ್ಯರಾಜಕವನೊಂ
ದಾಗಿಸುತ, ರಕ್ಕಸರನೊಳ್ಗೆಡಿಸಬೇಕೆಂಬ
ಕೌಶಿಕನ ಗೂಢತಂತ್ರದ ಬಿತ್ತದಿಂತು ಬೆಳೆ
ಯುತ್ತಲಿಹುದೆಂಬುದನ್ನರಿತಾ ಮಯಾದಿನಾ
ಯಕರು ದಿಗಿಲಾಗಿಹರು! ಹಗೆಗಳಲ್ಲಿಂ ಮಿಥಿಲೆ

ಗೆಯ್ತುರುತ್ತಿಹರಂತೆ! ದೊರೆಗಿದಂ ಬಿನ್ನಯಿಪು
ದೆಂದು ಕಳುಹಿದರೆನ್ನನೆ'ಂದಾತನೆಱಗಿದನು. ೧೦

ಸಾರಣನ ನುಡಿಗೇಳ್ದ ರಾವಣನೆದೆಯ ನಡುವೆ
ಮಂದರಂ ಕೆಡೆದತ್ತು—ಕಡೆಯಲಾರಂಭಿಸಿತು!
'ಏನಿದೇನಿದು! ನಮ್ಮ ಬೊಮ್ಮರಕ್ಕಸರ ಕೈ
ವಾರದಾಳ್ಕೆಯ ಮಹಾರಾಷ್ಟ್ರಕ್ಕೆ, ಕೌಶಿಕಂ
ಕೌಶಿಕಪ್ರತಿಮನಾಗಿಹನೆ! ಗುರುಗುಮ್ಮೆಂದು
ಕೂಗುವನೆ! ತನ್ನ ಹಿಂದಣ ರಾಜನೀತಿಯಂ
ಮಸೆವನೇ! ಪೋ; ಮರುಳ್ಗುಣಿತಕ್ಕೆ ತಾಳವಂ
ಪಿಡಿದಿಂತು ದಶರಥಂ ದಾರಿಹೋಗುವ ಜಗಳ
ವನು ಬಡ್ಡಿಗೊಟ್ಟು ಕೊಂಬಾ ಮಂಕುಬುದ್ಧಿಗೆಡೆ
ಗೊಡುವಲ್ಲಿ, ಹಿರಿಯನಾದನರಣ್ಯಕನ ಗತಿಯ
ನೇಕೆಣಿಸನೋ! ತಪ್ಪಿದೆಂ—ಬುದ್ಧಿ ಕೆಟ್ಟೆ ಮರು
ಳಹುದಲ್ಲವೇ? ಹೋಗಲೆನಗೇಕೆ ಜಂಜಡಂ?
ಜೋಗಿ ಜೋಗಿಯ ತೊಡಲು, ಮೆಯ್ಯೆಲ್ಲ ಬೂದಿಯ
ಪ್ಪಾ ನೋಟವನ್ನು ಕೌಶಿಕವಸಿಷ್ಠರ ಕೂಟ
ದಿಂ ನೋಡಲಪ್ಪುದದರೊಡನೆ ಬಹುಗಾಲದಿಂ
ದೊರೆಯೊಳೇ ಬೇಸರಿಸುತಿಹ ಚಂದ್ರಹಾಸವಿದು
ವಿಹರಣಂಬಡೆದೊಮ್ಮೆ ಸಂತಸದಿ ನರ್ತಿಸಲಿ!' ೧೧

ಎನಲಾ ಪ್ರಹಸ್ತನೊರೆದಂ: 'ನಿನ್ನ ಮಾತು ನ
ನ್ನಿಯ ತಿರುಳು. ಸಿದ್ಧರಸದಂದದಿಂ ಪ್ರಭುಶಕ್ತಿ
ನಿನ್ನೊಳೇ ಸನ್ನಿಧಿಯನೊಂದಿಪ್ಪುದದನು ಕೈ
ಗೊಂಡೆನ್ನ ಮಂತ್ರಕಾಂಡಂ ತಾಂಡವಿಪುದಲ್ತೆ?
ಮೊತ್ತಮೊದಲೆತ್ತಬೇಹುದು ಮಂತ್ರನಂ ಮತ್ತೆ

ತಂತ್ರವನ್ನೆಂಬುದಿದು ಶಾಸ್ತ್ರರೂಢಿಗಳ ಮತ
ವಲ್ಲವೇ?' ಎನಲು ರಾವಣನೊಪ್ಪಿದಂ; ಮಂತ್ರಿ
ಸಾರಣನ ಮೊಗವನೀಕ್ಷಿಸಿ ಮಾತನಾಡಿದನು:— ೧೨

'ಕವಲೆಣಿಸದೆಲೆ ದೂತ ಪೋಗುತೀ ದೊರೆಯಾಜ್ಞೆ
ಯರುಹಿ ನಮ್ಮವರನೊಡಗೂಡಿ ಮಂತಣವೆಸಗು.
ಸಿದ್ಧಾಶ್ರಮದ ದಾರಿವಿಡಿದರಸುಮಕ್ಕಳೊಡ
ಗೂಡುತಾ ಮುನಿ ವಿದೇಹನ ರಾಜಧಾನಿಗೆ
ಯ್ತರುವಲ್ಲಿ, ನಮ್ಮಯ ಮಯಾದಿಗಳು ಮೊಸಲಿನ
ಮಾಯವಂ ಬೀರಿ ಹೊಸದೊಂದು ಮಿಥಿಲಾಪುರಂ
ಗಾಣಿಸುತ, ಹಂದರವನಣಿಮಾಡಿ, ಜನಕನಂ
ಸೀತೆಯಂ ಪರಿವಾರವಂ ಸಭಾವಲಯವಂ
ಕನ್ನಡಿಸುತಾ ಬಪ್ಪವರನಾನೆಗಪ್ಪಿನಲಿ
ಕೆಡೆಯಿಸಲು ಬೇಕಂತು ಹೆಸರನಳಿಯಿಸಬೇಹು
ದದು ಸಾಗದಿದ್ದರೆಂತಾದರೂ ಸೀತಾಸ್ವ
ಯಂವರಂ ಮುಗಿವನ್ನನವರನಲ್ಲೇ ತಡೆಯ
ಬೇಹುದಿದಕಂಜದಿರಿ; ಬೆಂಗಾವಲಾಗಿ ಬಾಂ
ದಳದೊಳಾವಿಹೆವೆ'ಂದು ಬೆಸಸಲ್, ಮಹಾಪ್ರಸಾ
ದವೆನುತ್ತ ಸಾರಣಂ ಸರಿದನೊಡನಲ್ಲಿಂದ. ೧೩

ಕಣ್ಣ ಮನದಳತೆಗಳಿಗೊದಗದಾ ಕಾಲವನು
ಕಂಡುದೆಂತೆಂತೆಂತೊ ಕಂಡರೂ, ರಕ್ಕಸರ
ಕೌಳಿಕದ ಹೆಗ್ಗಾಡಿನತ್ತ ನೀನೇಕಾಕಿ
ಯಾಗಿ ಬೆಚ್ಚದೆ ಪೋದೆಯೆಂತೆಂತೊ ಪೋದರೂ,
ಮಾಯಗಾರಿಕೆಗೆ ತಾಯ್ಮನೆಯಾದ ಕಣ್ಮನಂ
ಗಳಿಗೆ ಗೋಚರಿಸದಾ ದಾನವರ ಗೂಢತಂ
ತ್ರವನೆಲ್ಲವೆಂತು ಹೀರಿದೆಯೆಂದು ಬೆಕ್ಕಸಂ
ಬೆರಗಾಗಿ ಕೇಳುವಿರೆ? ಕೇಳಿರಂತೊಂದು ಬ

ಲ್ಮೆಯ ದೇವದತ್ತವರಬಲವಿಲ್ಲದಿರೆ ಕವಿಯೆ
ನಿಪ್ಪೆನೇ? ರಾಮಾಯಣವನೋದುತಾದಿಕವಿ
ಯಾದ ವಾಲ್ಮೀಕಿಯೋದಿನ ತಿರುಳನೇನರಿಯ
ಲಾಪೆನೇ? ಕೇಳುತಿದನೀತನೇಂ ಮಾಟಗಾ
ರನೊ ಎಂದು ಜುಂಜುಮಿಸದಿರಿ; ನಂಜನೂ ಪುಟ
ಕ್ಕಿಟ್ಟು, ಸಂಜೀವನದ ಮದ್ದಾಗಿ ಮಾರ್ಪಡಿಪ
ಸಿದ್ಧರೆಂದೆನಿಪ ವಾಲ್ಮೀಕಿನಾಡೋಜಾದಿ
ಕವಿವರರನಾರಾಧಿಸುತ್ತೊಲವುಗೊಂಡ ಬಲ
ದಿಂದಿಂತು ಕಾಲದೇಶಗಳೆಲ್ಲೆಯಂ ಮೀರಿ
ನುಸುಳಲೆಡೆಯಾಯ್ತು; ಮರುಳಲ್ಲವಿದು ಹುರುಳೆಂದು
ಮತಿಗೊಂಡು ಕಾಂಬ ತಿರುಳನ್ನುಂಡು ಭಾವಿಸಿರಿ. ೧೪

---

## ಐದನೆಯ ಖಂಡ

ಕಾಲವೇನಿವರವರ ಹಂಗಿಗೊಳಗಾಗಿ ಕಾ
ಲಂ ತಡೆವುದೇ? ಹವಣನರಿತು, ಹದವಡೆದ ಹ
ಜ್ಜೆಯನಿಡಲ್ಕತ್ತ ಹಂದರದ ಸುತ್ತಲು ರಾಜ
ಸುತರಲ್ಲಿಗಲ್ಲಿ ಮಣೆಯೇರಿ ಮಂಡಿಸಿರಲ್ಕೆ,
ಹೊನ್ನುಡಿಗೆಯೊಲೆತಗಳ, ಮಣಿಮಯದ ತೊಡವುಗಳ,
ಮುತ್ತಿನ ತುರಾಯಿಗಳ ಸತ್ತಿಗೆಗಳರಳೆಲೆಯ
ಕುಣಿತಗಳ, ವಿೂಸಲಿನ ಗಾಳಿವೊಲದೊಳಗೆ ಸುಳಿ
ದಾಡುತಿಹ ಕಂಪಿನೊಂದಿಂಪುಗಳ ಸಿರಿಯ ಸೌ
ಭಾಗ್ಯಕ್ಕೆ ತಾವೆ ಹಿಗ್ಗುಗ್ತಿರಲ್ಕಿನ್ನಾರು
ಹಿಗ್ಗರೆಂಬುದನು ಸೂಚಿಸುವಂತೆ ಮೆಲ್ಲಮೆ
ಲ್ಲನೆ ತಲೆಯನೊಲೆಯುತ್ತ, ಕಡೆಗಣ್ಣ ಕೇಕರಂ
ನಲಿಯಿಸುತ, ಕೊರಲುದ್ದವಾಗಿ ತುರುಕಿದ್ದಾಸೆ
ದಿನಿಸುಗಳನಿನಿಸಿನಿಸು ಮೆಲುಕಾಡಿ, ನುಂಗಿ, ಸವಿ
ಗೊಳುತಲಿರುವಲ್ಲಂತವುರದಿಂದಲಾವುದೋ
ಘಂಟೆ ಘಣಘಣಿರೆಂದುದವರ ಮೆಲುಕಿನ ಸಮಾ
ಧಿಗೆ ಭಂಗವಾಯ್ತೊಡನೆ ಕಣ್ಣೊಲೆಯಲೆಯ್ತುರುವ
ಕಂಚುಕಿಯ ಕಂಡದೋ ಎಂದು, ಕಟ್ಟಿಗೆಕಾರ
ರಂ ಕಂಡಿದೋ ಎಂದು, ಕಾಲಕಡಗದ ಸುಣ್ಣ
ರಂಗೇಳಿ ಸೈಯೆಂದು, ಕಿಂಕಿಣಿಯ ದನಿಯರಿತು
ಹೈಯೆಂದು, ಬಗೆ ತಕ್ಕಥೈಯೆಂದು, ಮೆಲುದನಿಯ
ಗಾನಕ್ಕೆ ಕಿವಿ ನಲಿದು, ಕಂಪಿಂಗೆ ಮೂಗರಳಿ,
ರೂಪಕ್ಕೆ ಕಣ್ಣರಸಿ, ಮೆಯ್ಯುಳಿದ ಮನ್ಮಥಪಿ

ಶಾಚಿಯೊಂದೇ ಹಲವು ಮೆಯ್ಯೊಂದಿ ಬೇಹುಗೊಂ
ಬಂದದಿಂ ತೋರಿತಾ ರಾಯಗುವರರ ನೆರವಿ. ೧

ಸೀತಾಸಹೋದರಂ ಲಕ್ಷ್ಮೀನಿಧಿಯೆನಿಪ್ಪ
ನೃಪತನೂಜಂ ಮುಗುಳುನಗೆಯೊಳಿಕ್ಕಡೆಯೆದೆಯ
ನಮೃತಪ್ರವಾಹದಿಂ ತೇಂಕಿಸುತ, ಸಭೆಯು ನಡು
ವಣ ವೇದಿಯನ್ನೇರಿ, ವಿನಯವಿನಮಿತನಾಗಿ,
ನೆರವಿಗಣ್ಣೆಲ್ಲ ತನ್ನಲಿ ಮನಗಳೆಲ್ಲ ತ
ನ್ನಯ ಮಾತಿಸಲಿ ಬೆಸುಗೆಗೊಂಡಿರಲ್ಕಯ್ಯನಾ
ಣತಿಯನೀ ಪರಿಯಿಂದ ಬಿತ್ತರಿಸತೊಡಗಿದನು:— ೨

'ರಾಯರಾಲಿಸಬೇಕು; ಮುಗುದೆಯೆಮ್ಮಣುಗಿಯೂ
ರೂರರಸುಗನ್ನೆಯರವೊಲು ಜನರ ಜಂಗುಳಿಯೊ
ಳಿಳಿಯುತ್ತಲಲ್ಲಲ್ಲಿ ಸುಳಿದಾಡಿ ಪಡಿವೊಗಂ
ಗೊಂಡು ವರನನ್ನಾರಿಸಲ್ಕೆ ನಾಚುವಳೆಂದು
ಕನ್ನೆವಾಡದ ಕನ್ನಡಿಯ ಪಡಿಯ ಗಿಳಿವಾಗಿ
ಲೆಡೆಯಿಂದಲೇ ನೋಡಿ ನಿರ್ಧರಿಸುವಂತದೋ
ನೆರವನೆಸಗಿಹೆವಿಲ್ಲಿಗೆಯ್ತಂದು ಸನ್ನಿಧಾ
ನಂಗೊಂಡ ರಾಜಕದ ಕುಲಬಲಂಗಳ ಚಲದ
ಬೀರದಾಯತಿಕೆಯನು, ಬೇರೆಬೇರಾಗಿ ಬಿ
ತ್ತರಿಪ ಕುಲವೃದ್ಧೆಯರ ಕೆಳದಿಯರ ಸಲಹೆಗಳ
ನೆಲ್ಲವನು ಮಥಿಸುತ್ತಲಿಂತು ಬಿನ್ನಯಿಸುವಳು.' ೩

ಹಿನ್ನುಡಿಯನಿಂತವಂ ನಿಲಿಸಿದಂ; ಮುನ್ನುಡಿಗೆ
ಕೊರಳನಣಿಗೆಯ್ವೆಡೆಯೊಳಾಲಿಸುವ ರಾಯಗುವ
ರರು ಬಗೆಯೊಳೆಂತು ತಂತಮ್ಮ ಸಾಮುದ್ರಿಕದ,
ಕಣಿಯ, ಜಾತಕದ, ಶಕುನದ, ಫಲಂಗಳನು ಸುಲಿ
ಯುತ್ತೆತ್ತುತಿದ್ದರೋ—ಬಲ್ಲರಾರದನೆಲ್ಲ!

ಅವರಂತರಂಗವಂತಾಲೋಡನಂಬಡೆಯು
ತಿರೆ ಜನಕಸಂಭವನ ಮಾತರಳತೊಡಗಿದುದು:— ೪

‘ಬಾಲೆಯಾಡುವಳಿಂತು: ತೆರೆಯಿಂದೆ ಮೇಲೆ ತೆರೆ
ಯೇರಿ ತೋರುವ ನೃಪಕುಲದ ಬಾಹ್ಯಸೌಂದರ್ಯ
ವಂ ಕಾಣುತವರೆದೆಯೊಳಗೆ ಬೇರೆಬೇರಾಗಿ
ಮಿಂಚುವಾ ಕ್ಷಾತ್ರಸೌಂದರ್ಯಗಳ ತಾರತ
ಮ್ಯಂಗಳನ್ನರಿಯಲ್ಕೆ, ತೂಗಿ ನೋಡಲ್ಕಿಂತಿ
ದೆಂದು ನಿರ್ಧರಿಸಲ್ಕೆ, ಮನವಂಜಿ ಹಿಂಜರಿಯು
ತಿದೆ! ರಾಜರೊಳಗೆ ವೀರತೆಯನೇ ಸರ್ವಸೌಂ
ದರ್ಯಕಗ್ಗಳವೆಂಬುದಲ್ತೆ ಬಲ್ಲವರೆಣಿಕೆ
ಯದರಿಂದಲಂತದಂ ಕಂಡು, ಮಾಲಿಕೆಯನಿ
ಕ್ಕುವೆನೆಂದು ತಾತಂಗೆ ಹೇಳಿ ಕಳುಹಿದಳದ
ಕ್ಕನುವಾಗಿ ನಾಳೆ ಸುಮುಹೂರ್ತದಲಿ ಕುಲದೈವ
ವಾದ ಪರಶಿವನೊಲ್ಮೆಯಿಂದೆಮ್ಮ ಕುಲಕೆ ಪತಿ
ಯಾದಾ ವಿದೇಹಂಗೊದಗಿ ಪರಂಪರೆವಿಡಿದು
ಭವನದೊಳು ನೆಲೆಗೊಂಡ ಭವನ ಬಿಲ್ಲನ್ನೆತ್ತಿ,
ಅಂಬರಂದಿರಿವ ಯಂತ್ರದ ಮತ್ಸ್ಯವನ್ನಾವ
ಚೆನ್ನನಲಗಿಂ ಭೇದಿಸುವನಾತನೇ ವೀರ
ವೃತ್ತಿಯಂ ಕನ್ನೆಯಂ ಕೈವಿಡಿವನೆಂದೆನು
ತ್ತೆಮ್ಮಯ್ಯನಾದರಂಬೆರೆದು ಬಿನ್ನಯಿಸಿದನೆ’
ನುತ್ತಿಳಿದನೆಲ್ಲವರ ಬೇವಸದ ಬಗೆಯೊಡನೆ. ೫

ನಾಡೋಜನಹ ಜನಕನೆಣಿಕೆಯಿಂ ಹದವಡೆದ
ನುಡಿಯೊಂದೆ ತಮ್ಮ ಸೌಭಾಗ್ಯಸೌಂದರ್ಯಲ
ಕ್ಷಣಗಳಂ ನಂಬಿ ಮುಂ ನೋಡುತಿಹ ರಾಜಸೂ
ನುಗಳೆದೆಯ ಮೇಲೂರಿ ಕರಗಸಂಬರಿದುದು
ಕ್ಕುತ್ತಲಿಹ ನಾಲಗೆಯ ನಡುವನೆಲೆಯುಳಿಯಾಗಿ

ಬೆಟ್ಟದುದು—ಶೀಲಕ್ಕೆ ಕೀಸುಳಿಯನಿಕ್ಕಿದುದು.
ಮುಖಕಮಲ ಮುಖಚಂದ್ರ ಮುಖಮಂಡಲಗಳೆಂದು
ಪೊಗಳಿ ಬಣ್ಣಿಸುತಲೂಳಿಗಗವಿಗಳರಳಿಸಿದ
ತುಂಬಿಸಿದ ಬಟ್ಟಲಾಗಿಸಿದ ಮೋರೆಗಳೆಲ್ಲ
ಮುಸುಡಾಗೆ, ಮಣೆಯಿಳಿದು ತಂತಮ್ಮ ಬೀಡುಗಳ
ಗೂಟಕ್ಕೆ ಸಂಕಲೆಯೊಳೆಳೆವಂತೆ ಸಾಗಿದರು.
ಬಗೆಯೊಳೇ ಬಯ್ದುರೆದೆಯೊಳಗೆ ಸುಯ್ದುರು; ಕೊರಳ
ಗುಳಿಯಲ್ಲಿ ಗೊಣಗಿದರು: 'ಬಿಲ್ಲಾಟವಿನ್ನಾವ
ಮಾಯವೋ! ಮಾಟಗಾರಿಕೆಯೊ! ಮಂಕೋ! ಸೋಂಕೊ!
ನಾಳೆ ಬೇರೊಂದು ಕೊಂಕಿನ ಬಾಳನೆತ್ತುವನೊ!
ಜನಕನೋ! ಕೈತವದ ಜನಕನೋ!' ಎಂದು ಗುಡು
ಸಿಂದೊಳಗೆ ಸುಳಿವ ಕೀಯೆಂದೆನಿಸಿತಾ ನೆರವಿ. ೬

———

## ಆರನೆಯ ಖಂಡ

ಆಂತಾ ಸ್ವಯಂವರದ ಕಾಲಕ್ರಮುವ್ಯತ್ಯ
ಯಂಗಳನು ಬೇಹಿನವರಿಂದರಿದ ರಾವಣನ
ಮನದೊಳಗೆ ಜನಕನೆಣಿಕೆಯ ಕುಣಿಕೆ ಕೋದತ್ತು.
ಮಂತ್ರಿಯೊಡನಾಲೋಚಿಸುತ್ತ ನಿರ್ಧರಿಸುತ್ತ-
ಲೇಡಿಗಾಲಂ ಮುರಿಯುತೇಡಿಯೆದೆಯನೆ ಕುತ್ತು
ವೊಂದು ಜಾಣ್ಮೆಯಲಿ ಬಲ್ಲಿದನಾರು—ಜನಕನೋ?
ರಾವಣನೊ? ನೋಡಬೇಕೆಂದು ಬಗೆದಂದನಾ
ಪುಷ್ಪಕವನೇರುತ್ತಲಂತರಾಳಂಬರಿದು
ಕಲ್ಲನಗಲಿದ ಗುಳಿಗನಂತೆ ಮಯಸಾರಣಾ
ದಿಗಳೆಸಗಿ ಕಳೆವಡೆದ ಮಾಯಾಸ್ವಯಂವರದ
ಮಂಡಪದ ಮೇಲೊಮ್ಮೆ, ಮಿಥಿಲಾಪುರಾಂಕಣದ
ಹಂದರದ ಮೇಲೊಮ್ಮೆ, ಹರಿದಾಡುತಲಿ ನಾಡ
ಮೇಲದೃಷ್ಟಂ ಬೀದಿವರಿವಂತೆ ಮಂಡಲಂ
ದಿರಿದು, ಶನಿವಿಡಿದನಂತಿದ್ದ ರಕ್ಕಸನೆಡೆಗೆ
ಕಳವಳದ ಮುದ್ರೆಯಚ್ಚೊತ್ತಿದಂತಿದ್ದ ಸಾ
ರಣನೋಡಿ ಬಂದು, ಕೊರಗುತ್ತ ಕುರುಡಾಗಿ ಕಾ
ಲ್ವಿಡಿಯಲಾತನ ಮೊಗದಿ ನುಡಿಯೊಸರುಗಾಣದಾ
ರಾವಣಂ ಬೆರಗಾಗಿ ಬೆಸಗೊಂಡ ನೆಲವೆಲವೊ!
ಬಳಲಿಕೆಯ ಕುರುಹಿಲ್ಲವಂಜಿಕೆಯ ಬರಹಗಳೆ
ವೋರೆಯಲ್ಲಚ್ಚಾಗಿಹವು! ಮುನಿಯ ಮಾಟವೇಂ
ಮಿಗಿಲಾಯ್ತೆ? ಹೇಳುಹೇಳೆಂಬರಸನೊಡನೆ ಕರ

ಪುಟಘಟಿತನಿಟಿಲತಟನಾಗುತ್ತ ಮೆಲ್ಲಮೆ
ಲ್ಲನೆ ಬೆದರಿಕೆಯನೊರಸುತಿಂತು ಬಿನ್ನವಿಸಿದನು:— ೧

'ನಿನ್ನಾಣೆಯುಂದದಿಂದಲ್ಲಲ್ಲಿ ಚೆದರಿದಾ
ನಮ್ಮ ರಕ್ಕಸರನೊಡಗೂಡಿಸಿದೆವಾಮೇಲೆ
ಮಾವ ಮಯವಿಶ್ವಕರ್ಮನೆ ಮನದ ನೂಲ್ವಿಡಿದು,
ಸಿದ್ಧಾಶ್ರಮದ ದಾರಿಗಾವಿನೊಳಗೀ ಮಿಥಿಲೆ
ಗೊಂದು ಪಡಿಚಂದವಂ ನಗರವನ್ನಾಗಿಸಿದ
ನಂದವಂ, ಚಂದವಂ, ಚದುರಿನಚ್ಚಿನೊಳೊತ್ತಿ
ಮಿರುಪ ಚಾರಿಯನು, ಬಿನ್ನಣಿಗತನದಣಿಗಟ್ಟ
ನಿಂತೆಂದು ಬಣ್ಣಿಸಲ್ಕಾನೇಂ ಮಹಾಕವಿಯೆ?
ನಚ್ಚಿನಚ್ಚಿನ ಕಲಾದೇವಿ ತಾನಲ್ಲಿಯೋ
ಲಗಗೊಳುತ್ತಾಳುತಿದ್ದಳು. ಮಿಥಿಲೆಯೊಳಗಿಪ್ಪ
ಕೂಡಿ ನೆರೆದಿಹ ಜನರ ಜಂಗುಳಿಗೆ ಪಡಿಯಾದ
ಮಂದಿಯೆಲ್ಲವದಲ್ಲಿ ನೆಲೆಗೊಳುತ್ತಲೆಯುತಿರೆ,
ಮಯನೇ ಜನಕನಾದನಾನೇ ಕುಶಧ್ವಜಂ;
ಕಾಮರೂಪಿಣಿ ಶೂರ್ಪಣಖೆ ತಾನೆ ಸೀತೆಯಾ
ದಳು, ಕೆಳದಿಯರ ಬಳಗದಿಂ ಸುತ್ತುವೆರೆದಿದ್ದ
ಳೆಂದ ಮೇಲೇನು ಮಾಯಾಪ್ರಪಂಚಂ ಬೊಮ್ಮ
ನಂ ನಗುತ್ತಿದ್ದುದೆಂದಲ್ಲದಿನ್ನೇನಲಿ!' ೨

ಮುನ್ನುಡಿಯನೆಡಗಲಿಸಿ ರಾಕ್ಷಸೇಶ್ವರನೆ'ಲವೊ!
ಸಂತಸದ ಸುಗ್ಗಿಯನ್ನರಳಿಸುವ ಮಾತಿದ
ಸ್ಫುಟವಾಗಿ ಮೊಳಗಲೇಂ? ಕಣ್ಣೀರ ಮಳೆಯಿದೇಂ?
ಮೋರೆ ಮುಗಿಲಾವರಿಸಿ ಕಾಂಬುದೇಂ? ನಮ್ಮಪಾ
ಳಯದೊಳೊಳಜಗಳವೇಂ ತಲೆಯಿಕ್ಕಿತೇ? ಮಂತ್ರ

ದಡಿಗಟ್ಟಿದಾರ್ಯರುಚ್ಚರಿಪ ಶಿಥಿಲದ್ವಿತ್ರ್ಯ
ವಾಯಿತೇಂ ಪೇಳು ಪೇಳೆಂ'ದೆಂಬ ರಕ್ಕಸಂ-
ಗರುಹಿದಂ ಸಾರಣಂ ಮುಂಗತೆಯ ಸಾರವಂ:— ೩

'ದೊರೆಯೆ ನಮ್ಮವರಲಸಲಿಲ್ಲೆಂಬುದಂ ನಿವೇ
ದಿಸಲಿಂತು ಬಿತ್ತರಿಸಬೇಕಾಯ್ತು. ನಿನ್ನ ಪು
ಷ್ಪಕವಲ್ಲಿ ಬಾಂದಳಂಬರಿದು ಕಣ್ಮರೆಯಾದ
ವೇಳೆಯಲ್ಲಾ ಕೋಸಲದ ರಾಯಗುವರರನು-
ಗಮಿಸುತಿರೆ ಜನಕರಾಜನ ದಂಡನಾಯಕಂ
ಮುಂ ನಡೆಯುತಿರೆ, ಸುತ್ತುಮುತ್ತಲೂ ತುಳಿಲಾಳ್ಗ
ಳಡಿಯಿಡುತ್ತಿರೆ, ನಟ್ಟನಡುವೆ ಕೌಶಿಕನದೋ
ಬಂದನಿದೊ ಬಂದನೆಂಬೆಮ್ಮ ಬೇಹುಗರ ಪಿಸು
ಮಾತು ಕಿವಿಯೊಳಗೆ ನುಸುಳುತ್ತಿರಲ್ಕೆದೆಯೇರು
ತಿದಿರುಗೊಳೆ ನಾವೆಯ್ದಲಾ ದಂಡನಾಯಕನ
ಕರ್ಣಮಂತ್ರಂಬಡೆದ ಮುನಿಯ ಮೊಗವೊಮ್ಮೆಯೇ
ಬೆಂಕಿಯೊಂದುರುಳಿಯಾದುದು! ಕಣ್ಣ ಕೇಸುರಿಯ
ನುಗುಳಿತೆದೆಯತ್ತಣಿಂದೆದ್ದು ಗುಡುಗುಡಿಸುವಾ
ರಕ್ಷೋಘ್ನಮಂತ್ರವಂ ಕಾರಿದುದು! ಕೊರಳದ
ಕ್ಕೇಂ ಬಲ್ಮೆಯೋ—ಸಿಡಿಲು ಬಡಿದ ಪರಿಯಾದತ್ತು!
ಸಿರಿ ಕಂದೆರೆದ ಹೊಳಲು ತುರುಗಿ ತುಂಬಿದ ನೆರವಿ
ಯರೆನಿಮಿಷದೊಳು ಮಸಣವಾಯ್ತಯ್ಯ! ಕೌಶಿಕನ
ಮುನಿಸಿಗಿದಿರಾದ ಮಾವನ ಮುಸುಡನೇನೆನಲಿ!
ಮೊತ್ತವೊದಲಿದನು ಸನ್ನಿಧಿಯಲ್ಲಿ ಬಿನ್ನವಿಸ
ಬೇಕೆನುತ್ತೋಡಲಾಂ ಹಿಂಜರಿಯಲಾ ರಾಯ
ಗುವರರೊಳು ಕಿರಿಯನಾದಾ ದಡಿಗನೊಮ್ಮೆ ಕಡೆ
ಗಣ್ಣಿಂದಲೆನ್ನೆದೆಯ ತಂತಿಯಂ ನಸುಮಿಡಿದ
ನಿನ್ನೂ ಸರಂಗೊಡುತಲಿದೆ! ನಡುಗುತಿದೆ! ಮನಂ
ಮಿಡುಮಿಡುಕುತಿದೆಯೆನುತ್ತಾತನಡಿಗೆರಗಿದನು. ೪

ಎಂದವನ ಭಯರಸಂ ಗಾಸಿದೆದೆಯಚ್ಚೊತ್ತಿ
ನಿಂದ ನೋರೆಯನು ಮಿಳ್ಮಿಳಿಸುತಿಪ್ಪೆವೆಗಳನು
ನೋಡಿದಾ ರಾವಣಂ ಪೂವೇರಿದಾ ಬೂತ
ದಾಕಾರಗೊಂಡುದಂ ಕಂಡನಾ ರಾಜನೀ
ತಿಯನುಂಡು ಮೈವಡೆದ ಸಚಿವಂ ಪ್ರಹಸ್ತನೇಂ
ಚದುರನೋ! ದೊರೆಯ ಕೋಪಾವೇಶವನ್ನಿಳಿಸ
ಲೊಂದು ಮದ್ದನ್ನರೆದು ದೂತನ ಮೊಗಂ ನೋಡಿ,
ರಾವಣಂಗೆರೆದು ಸಂತಯಿಪ ಬಗೆಯಿಂದೊಂದಿ
ನಿತ್ತನಿತು ಮಾರ್ಪಡಿಸಿ ಸವಿಗೊಳಿಸುತಾಡಿದನು:— ೫

'ಸಾರಣಾ! ಕುರುಡದಿರ್! ಪರಡದಿರ್! ಭೂಮಂಡ
ಲವನೊಂದು ಕೆಯ್ಯೊಳೇ ಕಂದುಕವನಾಡುವೀ
ದೊರೆಯ ಪನ್ನತಿಕೆಯನು, ಪೌರುಷಪರಾಕ್ರಮಂ-
ಗಳನು, ಕೆಲಗಾಲದಿಂದಿತ್ತಲಾ ಬಡಗನಾ-
ಡಿನ ನೀರ್ಗುಡಿದ ಕತದೆ ಮರೆತೆಯಾ? ಮರೆತರೇ
ನರಸನಿದಿರೊಳಗಂಜಿಕೆಯ ಗೊಂದಲವಿದೇಕೆ?
ಸಾಮಾನ್ಯನಾದ ಮೂಗಿನ ಮೌನಿಯಲ್ಲವಾ
ಕೌಶಿಕಂ! ತನ್ನ ಹಿಂದಣ ರಾಜನೀತಿಯನು
ಶಮದಮಾದಿಗಳ ಸಾಣೆಯೊಳೊಡ್ಡಿ ಮಸೆದಾದ
ಋಷಿರಾಜನೀತಿಯನ್ನೆಮ್ಮಲ್ಲಿ ಹರಿಯಿಸ
ಲೈತ್ತಿರುವನುತ್ತರಾಪಥದ ರಾಜಕವೆಲ್ಲ
ವಾತನಡಿವಿಡಿದು ನಡೆವಂದವಂ ನೋಡುತ್ತ,
ಹಿಂದಣನರಣ್ಯಕನ ಕಾಲವಲ್ಲೀ ಬಡಗ
ನಾಡೊಳಗೆ ಹೊಸಹುರುಪು ಮರುಳೆದ್ದು ನಲಿಯುತಿಹು
ದದರಿಂದ ಕಾಲಕನುವಾಗಿ ನಯವೆಂಬ ಗಾ
ಳವನೊಡ್ಡಿ ಮೀಂಗಳಂ ಪಿಡಿಯಬೇಕಂತೆ ನೇ
ಣಲಿ ಕಟ್ಟಿಕೋದು ಸರಗೊಳಿಸಬೇಕೆಂದರಸ
ನಿಂತು ಬೇರೊಂದುಪಾಯಕ್ಕೆ ಕೈನೀಡಿರುವ

ನಲ್ಲದೀ ಜ್ವಾಲಾಮುಖಂದೆರೆದನಾದರಾ
ಕೌಶಿಕನ ಕೂಗೆಲ್ಲಿ? ರಾಮಲಕ್ಷ್ಮಣರೆಂಬ
ವರ ಪೋಗದೆಲ್ಲಿಯುನಿತಲ್ಲದೀ ವಿಶ್ವವೆ
ಲ್ಲಂ ಬೂದಿಯೊಡನೆ ಹಿಟ್ಟಹುದೆಂದು ಬಗೆದೆಮ್ಮ
ಚಕ್ರಾಧಿಪತಿ ಮನಂಗಡೆಯುತ್ತಲಿಹನಲ್ತೆ!' ೬

ಮಂತ್ರೀಶ್ವರನ ಮಾತಿನೊಡನುರಿಯನಗಲಿದಾ
ರಕ್ಕಸನ ಮೋರೆಯನುಭಾವವನು ಕಂಡು ಬಗೆ
ಗೊಂ'ಡೆಲವೊ ಪೋಗು; ಮೆಯ್ಯಂ ಮರಸುತೆಡೆಯನರಿ
ತೊಂದೊಂದು ರೂಪಾಗಿ ಹರಿದು, ನಮ್ಮಾಳ್ಗಳೊಡ
ನಲ್ಲಲ್ಲಿ ಹೊಗುತ ಹೊರಡುತ್ತ ಸುಯ್ಯೆನಿಸುತೆದೆ
ಯಲಿ ನುಸುಳಿ ಹೊರಸೂಸುವೆಲರಂತೆ ಸಂದೇಹ
ಕೆಡೆಯಾಗದಂತಲೆದು, ರಿಪುಗಳಾಯತಿಕೆಯನು,
ಮನದ ಹೂಣಿಕೆಗಳನು, ಕೆಯ್ಯ ಮಾಟಂಗಳನು,
ಹೊಲಬನರಿದಾಗಾಗ ಧೈರ್ಯದಿಂ ಬಂದು ಸ
ನ್ನಿಧಿಗೆ ಬಿನ್ನಯಿಸುತಿಹುದೆ'ಂಬ ಮಂತ್ರಿಯ ಮಾತು
ಗೇಳುತರಸನ ಮೊಗಂ ನೋಡುತ, ಹಸಾದವೆಂ
ದಡಿಗೆರಗಿ, ಸಾರಣಂ ಸಾರಿದಂ ಗುರಿಗೊಂಡು. ೭

ಅತ್ತ, ಮಿಥಿಲಾಪುರದ ಹೊರವಳಯದಲಿ ಜನರ
ಜಂಗುಳಿ ಪೊದಳ್ದುದದೊ! ಕೌಶಿಕಮುನೀಶ್ವರಂ
ರಾಜವೈಭವದಿಂದೆ ದಂಡನಾಯಕನೊಡನೆ
ಹಿಂಬಾಲಿಸುವ ಜಕ್ಕಜೌವನಿಗರಾದಿಬ್ಬ
ರರಸುಗುವರರ ಮೇಳವಡೆದದೋ ಬರುತಿಹನು!
ಬಹನು! ಬಂದಂ! ಬಂದನೆಂಬ ನುಡಿಯುಗ್ಗಡಿಸೆ,
ಸಕಲಾಂತರಂಗಬಹಿರಂಗ ಸನ್ನಾಹದಿಂ
ದಿದಿರುಗೊಳಲೆಂದು ಜನಕಂ ಮುಂಬರಿದು ಪೋಗೆ
ಸುದ್ದಿ ಹರಡಿತು—ಬೀಡುಬೀಡುಗಳೊಳಗೆ ಹುರುಡ

ನೆಬ್ಬಿಸುತ್ತಿದ್ದುದರಮುಕ್ಕಳಿದೆಯೊಳಗೊಳಗೆ.
ಅನಿತರಲ್ಲದೊ ವಿದೇಹಂ ದಾರಿದೋರಿಸು
ತ್ತಿರೆ, ಮೆಲ್ಲಮೆಲ್ಲನೆಯ್ತುಪ್ಪವನೆ ರಾಜರ್ಷಿ
ಯಾರ್ಯಕುಲಪಂಜರಂ; ಹಿಂದೆಡದ ಪಕ್ಕದ
ಲ್ಲೆರಡು ಬಿಲ್ಲುಗಳನೊಂದೇ ಕೆಯ್ಯೊಳಾಂತತ್ತ
ಲಿತ್ತೊಲೆವ ನೀಳ್ಗಂಗಳಿಂ ನೋಳ್ಪರೆದೆಗಳಂ
ಹೀರುವವನೇ ಲಕ್ಷ್ಮಣಂ; ಬಲಗಡೆಯೊಳದೋ
ಹಸುರುಮಣಿದಿರುಳ ಬಣ್ಣದ ಮೆಯ್ಯವಂ ವಿಕಸಿ
ತಾಂಬುಜೇಕ್ಷಣದಳಗಳಿಂದಮೃತವಂ ನೋಟ
ಕರಿಗೂಡಿಸುತ, ಮಂದಗಮನದಿಂ ಬರುವಾತ
ನವನೆ ಸೀತಾಮನೋನಾಯಕಂ ರಾಮನೆಂ
ದಾರೆಂದರೋ ನೆರವಿಯಲಿ –ಬಲ್ಲರಾರು! ತಿಳಿ
ನೀರ ತಂದಲಿನವೋಲಿಪ್ಪಾಪದಂ ಕಿಟಕಿ
ಯೆಡೆಯೊಳರೆಗಣ್ಣಿಟ್ಟ ನಾಡರಸುಮಕ್ಕಳೆಂ
ಬವರ ಕಿವಿವೊಕ್ಕಾಪದವೆಯಾಗಿ ಕಿಂಕಿರಿಸ
ತೊಡಗಿದುದು! ಪೋಗಲಾನುಡಿ; ವಿದೇಹಂ ಲೋಕ
ವಂದ್ಯರನ್ನತಿಥಿಗಳನೊಡಗೂಡಿ ಕರೆದೊಯ್ದು
ಮನ್ನಿಸುತ್ತಿರೆ ಮಂಗಳಾನಕಂ ಬಾರಿಸಿತು. ೮

---

## ಏಳನೆಯ ಖಂಡ

ಮೂರುದಿವಸವರಳಿತ್ತು; ಪರಿಮಳಂ ಬೀರಿತ್ತು;
ಸುಮುಹೂರ್ತಕಾಲವೈತಹ ಕೊಂಬು ಕೇಳಿತ್ತು.
ಮೊದಲಂತೆ ರಾಜಕುಲಮಂಡಲಂ ನಡೆತಂದು,
ಮಣಿಕಿರಣಮಸೃಣಾಸನಂಗಳಲಿ ಮಂಡಿಸಿತು.
ಅವರವರ ನೇಹಿಗರು, ಬೇಹಿಗರು, ಕಾಹಿನವ
ರವರವರನೊಂದಿರಲು ನಿಂದಿಠಲು ಮಿಳ್ಮಿಳಿಸು
ತಿರಲಾ ಸಭಾಮಂದಿರದ ನಟ್ಟನಡುವಿನಲಿ
ಮೀಸಲಾಗೇರಿಸಿದ ಮೂವಣೆಯ ಹತ್ತಿರಕೆ
ಮುಂಬರಿವ ಜನಕನೊಡನಾ ಕೌಶಿಕಂ ರಾಮ
ಲಕ್ಷ್ಮಣರು ಸರಿವಲ್ಲಿ ಕಣ್ಣೆಲ್ಲವಾ ಕಡೆಗೆ
ಬಾಗಿತು. ವಿದೇಹನತಿವಿನಯಾನುಭಾವವನು
ಸೂಸುತಿಪ್ಪಿಕ್ಕೈಯ್ಯ ಮುಗುಳಿಂದಲೊಪ್ಪಿಸಿದ
ಬಲಗಡೆಯ ದರ್ಭಾಸನವನು ವಿಶ್ವಾಮಿತ್ರ
ನೇರಿದಂ—ಕಾಮಾದಿಶತ್ರು ವಿಶ್ವಾಮಿತ್ರ
ನೆನಿಸಿದಾತ್ಮಂ ಹೃದಯಪೀಠವನ್ನೇರ್ವಂತೆ.
ಬಳಿಕ ನಗೆಗಣ್ಣಿಂದ ಗುರುವರಂ ಬರಸೆಳೆಯೆ
ಸೊಂಪಿನಾಸರೆ ಕಂಪಿನೊಸರುಗಳ ಚಿಲುಮೆಯಿಂ-
ಪಿನ ಬಟ್ಟಲೆನಿಪಲರ್ಮಣೆಯನಾಗಳ್ ನೋಟ
ಕರ ಕಣ್ಗಡರ್ವ ಸೈಪಿನ ಪಾಪೆಯಂತಡರಿ
ದಾ ರಾಮನಾರಾಮನೆನಿಸಲ್ಕೆ, ಬಳಿಯೊಳಿಹ
ಪೀಠವಂ ಪಕ್ಕಕ್ಕೆ ನೂಕಿ, ರಾಘವನ ಕಿ
ನ್ನೆಲೆವಾಸಿನಲ್ಲಿ ಮಂಡಿಸಿದ ಲಕ್ಷ್ಮಣನೊಂದು
ಮೊಗದೋಜೆಯಿಂ, ಕಣ್ಣೊಳುಕ್ಕುತಿಹ ಬಿರುಬಿಂಕ
ದುರುಬೆಯಿಂ, ಕಂಡರಸುಗುವರರೆಲ್ಲರ ಮೋರೆ
ಸೊರಗಿ ಬೆರಗಾಗುತೊಂದಚ್ಚರಿಯ ಪಡಿಯಚ್ಚೆ
ನಲ್ಕೆ, ಕಂಗೊಳಿಸಿತೆದೆ ಮಿದಿಯುತಿರೆ ಬೆದಬೆದನೆ. ೧

ಅನಿತರೊಳಗತ್ತ ಶಿವಕಾರ್ಮುಕಂ ಪೂಜೆಯಾ
ರತಿವಡೆದುದಾ ಜನಕರಾಜನಾಣತಿಯಂತೆ
ಹಲಮಂದಿ ಕಟ್ಟಾಳುಗಳು ಸುತ್ತುಮುತ್ತುತೆರ
ಗಿದರು; ಮೇಣ್ ಬಿಲ್ಲೊಡಂಬಡೆದ ಪೇಟಕವನೇ
ಕೋಲ್ಗಟ್ಟ ಹೊತ್ತೊಯ್ಯಲೆಂದು ಹವಣಿಸಲು, ಬಿ
ಲ್ಲೇಳದಿರೆ ಭಾರಕ್ಕೆ ಬೆರಗಾಗಿ, ಹಾಯೆಂದು
ನೆರವಿಯಂ ನೋಡಲ್ಕೆ, ತಲೆಗೇರ್ದ ಲಜ್ಜೆಯಿಂ
ಸೆಡೆದು, ಮೇಣ್ ಹುರುಪೆದ್ದು, ಬಿಂಕದಿಂದೆದೆಯುಬ್ಬು
ತಬ್ಬರಿಸುತುಬ್ಬರಂ ಬೀಗುತಂತಿಂತಾಗಿ
ಬವಣಿಗೊಂಡೆಂತೆಂತೊ ಬಿಲ್ಲೊಡನೆ ಸಭೆಯತ್ತ
ಸಾಗುವವಸರದೊಳಾ ದಕ್ಕಡಿಗರೆದೆಯಲ್ಲಿ,
ಹಣೆಯಲ್ಲಿ, ಕೆನ್ನೆಯಲಿ, ಕುರುಳ ಕೊನೆಯಲ್ಲುಸಿರ
ತಾಣದಲಿ, ಬೆಂಬೆವರ ಬಿಂದುಗಳ ತಂದಲುಗ
ಳವರೆದೆಯನಲುಗಿಸಿತು; ಕೋದಂಡದಂಡವಂ
ಕಂಡಂಜಿ ಕಾಳ್ಪುರಂಬರಿದುದೆಂದೆಂಬೆನೇ!
ಅಂತದೇಂ ನೆಡುಗಣ್ಣೊಳೀಕ್ಷಿಸುವ ರಾಜಕದ
ಮಾನಸಂಗಡೆವ ಮಂತಣಿಯಾದುದೆಂಬೆನೇ! ೨

ಧನು ಸಭೆಯನೊಂದಲು 'ತದೇವ ಲಗ್ನಂ' ಮಂತ್ರ
ದಿಂಚರಂ ಪಸರಿಸಿತು. ಜನಕಾವನೀನಾಥ
ನಾ ದಿವ್ಯಪೇಟಕದ ಬಳಿಗೊಂಡು, ವಿನಯವಿನ-
ಮಿತನಾಗಿ, ಕೈಮುಗಿಯುತೆಂದನಾಲಿಪುದರಸು
ಗಳ ಕುಲದ ತಲೆಯ ಮಾಣಿಕಗಳೇ ಮನ್ನೆಯರೆ
ಬೀರಸಿರಿಯಚ್ಚೊತ್ತಿದೆದೆಗೆಯ್ಯಬಲ್ಲಿದರೆ!
ಹಲವನೇಕೆಂಬೆನೆಲ್ಲಂ ಬಲ್ಲರಲ್ಲಿ? ನಿ
ಮ್ಮಲ್ಲಾವನೀ ಬಿಲ್ಲನೆತ್ತಿ, ಬಾಗಿಸಿ, ನಾರಿ
ಯಂ ಬಿಗಿದು, ಬಟ್ಟಲಿನ ತಿಳಿನೀರಿನೊಳಗೆ ಗುರಿ
ವಡೆದು ಬಾಂದಿರಿವ ಮೀಂಗಡಿವನಾತನ ವೀರ

ರಸದೊಸರ ಕೈಗೆನ್ನ ಕನ್ನೆ ಕೈನೀಡುವಳು!
ಜಸದೆಸಕವಂ ಪಸರಿಸುತ್ತಾರ್ಯರಾಜಕದ
ಕೀರ್ತಿಯಂ ಮೂರ್ತಿಗೊಳಿಸುವುದೆನುತ್ತಾಡಿದಂ. ೩

ರಾಮನಂ ಕಂಡು ಗರಣಂ ಪಿಡಿದರಸುಗುವರ
ರುತ್ಸಾಹದವಶೇಷವಾ ಬಿಲ್ಲನೀಕ್ಷಿಸುತ,
ಮೇಣ್ ಜನಕನೆಂದುದನ್ನಾಲಿಸುತ, ಬೆಂಡೆದ್ದು,
ಬಾಡಿ, ಬಸವಳಿದು ಗಾಳಿಯನುಳಿದ ತಿದಿಯಾದು
ದೆಂದ ಮೇಲಿನ್ನು ಬೇರೇನನೆನಬೇಹುದಾ
ಕೋದಂಡದಲಿ ತಿರುವ ಕೋದಂಡಲೆವ ಮನಂ
ಬಲಿದೇಳಿಸುವ ಬೆನ್ನಿನೆಲುಬುಡಿದವೋಲಾಯ್ತು. ೪

ಅನಿತರಲಿ ಹಾಯಾಗಿ ಮೂಗನರಳಿಪ ಹೊಚ್ಚ
ಹೊಸದಾದ ಹೂಗಾಳಿ ತಣ್ಣನಾ ಮಂಡಪದೊ
ಳಗೆ ಬೀಸಿತೇನದೆಂದೆಣಿಸಲದರಲೆ ಬಲಿದು
ತೆರೆಯುಕ್ಕಿ ಮಸಗಿತೊಂದವ್ಯಕ್ತಮಂಜುಳಂ
ನಾದವಂಕುರಿಸಿತಾಗಸದಿಂದಲದು ಕೆಳಗೆ
ಕೆಳಗಿಳಿದು ಬರುವಂತೆ ತೋರಿತಚ್ಚರಿವಡೆದು
ಹಂದರದ ಹೊರಗೆ ಕಣ್ಣಿಡೆ, ಪುಷ್ಪಕಂ ನೆಲಂ
ಮುಟ್ಟದ್ರ್ದದೊಳಗಣೆಂದಿಳಿದು ಲಂಕಾಧೀಶ್ವ
ರಂ ಮುಂದೆ ನಡೆವಾ ಪ್ರಹಸ್ತನೊಡನೊಳವೊಕ್ಕ-
ನೊಡವೆರೆದ ನೆರವಿಯೆದೆಯೊಕ್ಕಲೆದ್ದುದು—ಗಂಟು
ಗಟ್ಟಿ ಕಣ್ಣೊಳಗೆ ನಿಂದುದು; ಮೌನಮುದ್ರೆಯ
ನ್ನೆತ್ತಿ ಬಾಯಲ್ಲಚ್ಚನೊತ್ತಿದಾ ಕೂಟಕುಳಿ
ಗಳ ನಾಟಕವನದನ್ನೀಕ್ಷಿಪನೆ ಮೂಲೋಕ
ದಲ್ಲಣಂ ಮರೆದೀಕ್ಷಿಸಿದನಾದರವರ ಕಣ್
ಪುಳ್ಳೆಂದು ಪುಗುಳೇಳದೇ? ಭೋಂಕನೆಯ್ತಂದ-
ನೇರಿಸಿದ ಬಿತ್ತರಿಗೆಗಳ ಬಳಿಯೊಳಾಗ ಬಗೆ

ಬೇಡಬೇಡೆಂದರೂ, ಗಣಿಸದುರಿಗಣ್ಣತ್ತ
ಲೊಮ್ಮೆ ತರವಡೆದು ನಸುದಿರುಗಿದುದು. ಗಾಧಿಜನ
ಕೇಕರಂ ನೀಕರಿಸೆ, ರಾಘವನ ತುಟಿಯುಲ
ಮುರ್ಗುಳಾಗೆ, ಮಾಗಧೀಸುತನ ಕಣ್ ಕೆಂಗಿಡಿಯ
ನೋಕರಿಸಲವರೆದೆಯನಳೆಯುತ್ತ ನಡೆಯಲಾ
ನಾಡರಸರಂತರಂಗದ ರಂಗದಲ್ಲಿ ಭೇ
ತಾಳಂ ಪಟಾಕ್ಷೇಪವೆಸಗಿ ನಲಿಯುತ್ತಿತ್ತು. ೫

ಕೈಕಸಾನಂದನಂ ಬಿಲ್ಲೆಡೆಗೆ ಸಾರಿದಂ;
ತನ್ನ ದೇವನ ಕೆಯ್ಯ ಕಾರ್ಮುಕವನೆಡೆವಿಡದೆ
ನಿರುಕಿಸುತ್ತೊಂದಿನಿಸು ತಡೆದು, 'ಹರಹರಮಹಾ
ದೇವ ಶಂಭೋ ಶಂಕರಾ' ಎಂಬ ಮಾನಸದ
ಜಪದೊಡನೆ ಮೂವಾರಿ ಬಲವಂದನಂತರಂ
ಮಂತ್ರಾರ್ಥವನ್ನೆ ಕನ್ನಡಿಸುತ್ತಲಿಹ ತಂತ್ರ
ದಿಂದೆ ಪೂಜಿಸಿದನೆರಗಿದನೆದ್ದು ನಿಂದು ಕೈ
ದುಡುಕಿದಂ! ಮಿಡುಕದಿರಲೆದೆಗೆದರಿ ಮುಂಡಿಯು
ನ್ನೂರಿ ಬಲಗೆಯ್ಯಿಂದಲಂಕಕೇರಿಸುತುರ
ಸ್ಥಳಕಾನಿಸುತ್ತಲೊಂದುಕ್ಕಿನಿಂದೇಳುವೆಡೆ
ಯಲ್ಲಿ ಕೈಕಾಲು ನಡುಗಿತ್ತು! ಚೈತನ್ಯವಾ
ರಲ್ತೊಡಗಿತಂಗಂಗಂಗಳೆಲ್ಲವೂ ಸ್ವೇದಾಭಿ
ಷೇಚನಂಬಡೆಯಲ್ಕೆ, ಕಲ್ಲೆದೆಯ ಬಿಲ್ಲೊದೆದು
ದುಂಗುಟದೆ ನೆಲನಂ ಬಲಿದ ಕಾಲು ತತ್ತರಿಸು
ತಿರೆ, ನೋಟಕರ ಮೋರೆಯನುಭಾವನರ್ತನವ
ನಾರ್ತಡೆವರೆಂತೆಂತೊ ತಡೆದರೂ, ಕೂಟಕುಳಿ
ಗಳ ಗುಲ್ಲನಲ್ಲಗಳೆವವರಾರದಂತಿಂತು
ಕಳೆದರೂ, ಹೆಂಗುಸರ ಗೊಳ್ಳೆಂಬ ಗುಳ್ಳೆನೊರೆ
ಬೊಬ್ಬುಳಿಯ ಕಲಕಲಂಗಳನಂತು ಕೆಯ್ಪರೆಯ
ತಾಳಂಗಳೊಡಗೂಡಿ ಹರಿಯುವಾನಂದಗೀ

ತದ ಮೇಳವಂ ನಿವಾರಿಪರುಂಟೆ? ಖಳನ ಕಾ
ಮಕ್ಕೆ ಕೂಡಿದ ಬಲಿದ ಬಡ್ಡಿ ಮೂಲವನೆಲ್ಲ
ಮುಳುಗಿಸಿತ್ತೆಂಬ ಪಿಸುಬಣ್ಣನೆಯದರಳೆ, ರ
ಕ್ಕಸರಾಯನುರುಳಿದಂ ನೆಲಕಾಗ ಬಿಲ್ಲು ಹೆಗ
ಲಿಂದೆದೆಗೊದೆದುದೊಡಲನುದ್ದಿದುದು! ಸೊಂಟವ
ನ್ನೊತ್ತಿ ಕೆಡೆದತ್ತು! ಕಂಗೆಡದಾ ಪ್ರಹಸ್ತನಾ
ಣತಿಯಂತೆ ಪುಷ್ಪಕಂ ಬಿಲ್ಲೆಡೆಗೆ ಸಾರಿತೊಳ
ಗಿಂದಿಳಿದ ದಡಿಗರಾ ಧನುವನತ್ತಲು ತೆಗೆದು
ಬಸವಳಿದು, ಬಳಲಿ, ಬೆಂಡಾದೊಡೆಯನಂತಾಂಗು
ತೊಳಗೊಯ್ದರಾ ಪಾರು ಹಿಂಜರಿದು ನೆಲವನುಳಿ
ದುದು! ಕೈಪರೆಯ ತಾಳದೊಡನೆ ಬಾನೇರಿದುದು!
ಕೌಶಿಕನ ಮೋರೆಯಲಿ ಮುಗುಳುನಗೆಯರಳುತಿರೆ,
ಲಕ್ಷ್ಮಣನ ಕಣ್ ಮುಗಿಲೆಡೆಯ ಬಿಸಿಲನುಗುಳುತಿರೆ,
ರಾಘವನ ಮೋರೆ ಗಂಭೀರಭಾವದ ಮುದ್ರೆ
ಯೊತ್ತಿರಲ್ಕಾ ಸಭಾಮಂಡಲಂ ರಾಜಿಸಿತು. ೬

---

## ಎಂಟನೆಯ ಖಂಡ

ಲೋಕದಲ್ಲಣನೆಂಬ ಹೆಸರಾಂತು, ತಮ್ಮೆದೆಗೆ
ಭಯಕೇತುವೆನಿಸಿ, ಬಾಂದಳದಿಂದಲಿಳಿದ ರಾ-
ವಣನಂತು ಬಿಲ್ಹೊಡಕಿ ಹತ್ತಿಯಂತಾಗಿ ಹಾ-
ರಿದನಿದೋ ರಾಘವಂ ಬಿರುಗಾಳಿ ಮಳೆ ಬಿಸಿ-
ಲ್ಗಳುಕದ ಮಹಾಮೇರುವಾಗಿರುವನೆಂಬುದ
ನ್ನೆಣಿಸುತ್ತ, ಕಣ್ಣಾರೆ ಕಾಣುತ್ತ, ನಾಡರಸ
ರಂತರದಿ ಕೌಶಿಕನ ಸೂತ್ರವದು ಟಿಪ್ಪಣಂ
ಬರೆದ ಜನಕನ ವಚನದೊಡನೆ ಮುದ್ರಿಸಿದತ್ತು;
ಬಿಸಿಯಲ್ಲದಾ ಬೆಣ್ಣೆ ಕರಗದೆಂಬಾ ನಾಡ
ನುಡಿಯರ್ಥವೆತ್ತಲೂ ಪಸರಿಸಿತು. ಕಂಡ ಬ
ಟ್ಟೆಯೊಳೆ ಕಾಲಿಡಬೇಡಿರೆಂದಾಸನಂಗಳವ
ರೆದೆಯನಾಕರ್ಷಣಂ ಗೆಯ್ವುವೆಂಬಂದದಿಂ
ರಾಜಮಂಡಲವೆಲ್ಲ ಕುಳಿತಲ್ಲೆ ಕುಳ್ಳಿರೆಂ-
ದೆನಿಸಲವರಂತರಂಗುದಿವಗುಳನೆತ್ತಿ ಮಿದಿ
ದಾಮೇಲೆ, ಮುನಿವರನ ಕಡೆಗಣ್ಣದೆಡಗಡೆಗೆ
ಬಾಗಿತ್ತು; ಲಕ್ಷ್ಮಣನ ನಗೆಗಣ್ಣು ಬಲಗಡೆಗೆ
ನೆಗೆದತ್ತು; ಕಣ್ಣೆರಡರಿಕ್ಕುಳಿಂದೆತ್ತಿದಂ-
ದದಿ ರಾಘವಂ ಮೆಲ್ಲನೆದ್ದು ಗುರುಗೆರಗಿದನು. ೧

ಮುಂಜೆರಗನೋಸರಿಸಿ, ಕೋಸನೊಗ್ಗಿಸಿ, ನಡುವಿ
ನಿರುಕಿನೊಳು ತುರುಕಿ, ನೆಲಕಿಳಿದು ಸಂದಣಿಯ ಕ
ಣ್ಣೊಡವರಲು ನಿಧಿಯ ಸನ್ನಿಧಿಗೆ ಮಾಂತ್ರಿಕನೆಯ್ವ
ವಂತೆಯ್ದಿ, ಕೋದಂಡವಂ ನೋಡಿದಂ; ಭಕ್ತಿ

ಭಾವನಾಭರಿತವಾದೆದೆಯತ್ತಣಿಂದೋಂ ಸ
ಮತ್ಮಿನಾಯಾಕ್ಷರಂ ನೆಗೆಯೆ, ಮನದೊಳಗೆರಗಿ,
ಬಿಲ್ಲನೆಡಗೆಯ್ಯೊಳೀಳ್ದೊಡನೊಂದು ಕೋಲಂತೆ
ಬರೆ ಬಾಗಿಸಲು ಕೊನೆಯನೊತ್ತಿದಾ ಬಲ್ಪಿನಿತು
ಹಿರಿದಾಯ್ತು! ನಿರಿನಿಳಿಲುನಿಡಿಲುನಿಟಲೆಂದೆಂಬ
ಸಪ್ಪುಳುಬ್ಬರವಾಗೆ ನೆರವಿಯಚ್ಚರಿವೋಗೆ,
ಮೂನೆಲಂ ಮೂರಿವೋಯ್ತೆಂಬಂತೆ ನಡುಗುತಿರೆ,
ರಾಮನ ಮನಂ ಬೆರಗಿನೊಳು ತೂಗುತಿರುವಲ್ಲಿ
ಬಿಲ್ಲೆರಡು ತುಂಡಾಗಿ ಬಿದ್ದುದು! ಸಭಾವಲಯ
ದಂತರದೊಳದ್ಭುತರಸಂ ತುಂಬಿತುಳುಕಿದುದು! ೨

ಆಗಳಾ ಗಾಧಿಸಂಭವ-ಸುಮಿತ್ರಾಸುತರ
ಬಗೆಯರಳಿದುದು. ಜನಕನಂತರಂ ಸಂತಸದ
ತೆರೆಯೊಳೀಸಾಡಿತತ್ತಂ ಕನ್ಯಕಾಮಂಡ
ಲದ ಮಾನಸದೊಳಂಚೆಯೋಲಾಡುವಂದವ
ನ್ನರಿತು ಕೆಳದಿಯರೆನಿಪ ತುಂಬಿ ಕೋಗಿಲೆ ಗಿಳಿಗ
ಳುಲಿದಾಡಿ ಹಾಡಿ, ನಲ್ನುಡಿಗುಟ್ಟಿ ಚಳಿಯನೋ
ಡಿಸಿ, ಸುಗ್ಗಿಯನು ಹಬ್ಬಿಸಿದುವೆಂದು ಬಣ್ಣಿಸಲು
ಬಾಯ್ದೆರೆವೆನೇ! ತೆರೆಯಬಾರದದೊ ನೋಳ್ಪುದಾ-
ರಾಮಾಂತರಂ ಮಾಗಿಯಿಂದೆ ಮಾಸಿಹುದಲ್ತೆ! ೩

ಹೊಳಲೆಲ್ಲವಾನಂದನಾಟಕದ ರಂಗವೆಂ
ದೆನಲೊಸಗೆ ಮರುಳೆದ್ದು ಕುಣಿಯುತಿರೆ, ರಾಘವನ
ಕೀಳ್ಮೊಗಂಬಿಡಿದು ತೇಲ್ಪಿಂಗಿತದ ಬೊಬ್ಬುಳಿಕೆ
ಗಳನರಿತು ಲಕ್ಷ್ಮಣಂ ಗುರುವರನ ಕಿವಿಯೊಳಗೆ
ಸೂಸಲ್ಕೆ, ಜನಕನೊಡಗೂಡಿ ಕೋದಂಡಖಂ
ಡಂಗಳೆಡೆವಡೆದ ರಾಘವನಲ್ಲಿಗೆಯ್ದಿ ಮುನಿ
ದಾಶರಥಿಯಂ ಕುರಿತು ನುರಿತ ನುಡಿಯೆತ್ತಿದನು:— ೪

‘ಅಚ್ಚರಿಯಿದೇಂ? ನಿನ್ನ ಬಲ್ಮೆ ಸದ್ಧರ್ಮದೋ
ಜೆಯ ತುತ್ತತುದಿಯನೇರಿದುದನೀಕ್ಷಿಸಿ ನೆಲಂ
ಕೈವಾರಿಸಲ್ಕದೋ ರಾಜರ್ಷಿಯಾದೆನ್ನ
ಕೈಹರಸಲೆಂದೆತ್ತಿ ಬಾಗುತಿರಲಿಂತಿದೋ
ಜನಕಾವನೀಧರಂ ಗಿರಿಜೆಯಂ ಪಡೆದಾತ
ನಾದೆನೆಂದುಮ್ಮಹಂಬಡೆದು ನಲಿಯುತ್ತಿರಲು,
ದುರ್ಮ್ಮಾನವಂ ಮನದ ಮಂಡಪಂಬೊಗಿಸುತ್ತ-
ಲುಮ್ಮಳಂಗುದಿವಂತೆ ತೋರಲೇಂ ಕಾರಣಂ?
ಪೇಳುಪೇಳೆ’ಂದೆನಲ್ಕಾಲಿಸುತ ಮೆದುನುಡಿಯ
ಪರಿಮಳವನಾ ರಾಮನೆತ್ತಿ ಬಿತ್ತರಿಸಿದನು:— ೫

‘ಗುರು ಗುರುಪ್ರಭರಾಲಿಸುವುದು. ನಿಮ್ಮಯ ಮಾತಿ
ಗಿದಿರೆಂಬನಲ್ಲನಾನಾದರೂ ಕುನಿಸುತಿಹ
ಸಂಶಯದ ಕವಲುಗೊನೆಗಳನೆತ್ತಿ ಕಳೆದುಬಿಡ
ಬೇಕೆಂಬ ಬಗೆಯೊಳೇ ಬಿನ್ನಯಿಸಿದಪೆನಿಂತು;
ಸಾಮಾನ್ಯವಾದ ಬಿಲ್ಲಲ್ಲವಿದು! ನೆಲಕೆಲ್ಲ
ಕೋದಂಡವಿದ್ಯೆಗಾಸರೆಯಾದ ಪರಶಿವನ
ಕೆಯ್ಯನೇರಿದುದಾ ಮಹಾದೇವನೊಲುಮೆಯಿಂ
ಕುಲಪತಿವಿದೇಹಂಗೆ ದೊರೆದಾ ಪ್ರಸಾದವೆ
ನ್ನುವರಲ್ತೆ! ರಾಜಧರ್ಮಾದರ್ಶವಾಗಿರುವ
ಧನುವನಾವಂ ಬಾಗಿಸುತ ನಾರಿಯಂ ತೊಡಿಸು
ತಲಗಿಂದ್ಲಾಗಸಂದಿರಿವ ಮೀನಂ ಕಡಿವ
ನಾತಂಗೆ ವೀರರಸದೇವತಾಸಿದ್ಧಿಯಹು
ದೆಂಬ ವಿಶ್ವಾಸವಂ ಕನ್ಯಕಾದಾನದಿಂ
ದಚ್ಚೊತ್ತಿ ಮುದ್ರಿಸುವೆನೆಂದು ಜನಕಂ ಪೂಣ್ದ
ನಲ್ಲವೆ.? ಭಾವಿಸಲ್ಕಾ ದಾನಕಾನರ್ಹ
ನೆಂತಾಗುವೆಂ? ತರಳತನಕೆ ತುತ್ತಾಗಿ, ನಾಂ-

ದೀ ಮಂತ್ರದೊಂದು ಸುಯ್ಲೊಳೆ ಜಳಜಳಿಸುವ ನಂ
ದಾದೀಪವನ್ನೂದಿ ನಂದಿಸಿದೆನಲ್ಲವೇ?
ಬಿಲ್ಮುರಿದು ಶಿವನಂತರಂಗವಂ ನೋಯಿಸಿದೆ
ನಲ್ಲದಾಂ ನಿಯಮಕಂಕಣಬದ್ಧನಾದೆನೇ?
ಪಾಪವೆನ್ನಂ ಬೆನ್ನುಬಿಡುವುದೇ? ದಕ್ಷಿಣಾ
ಮೂರ್ತಿಯಾದಾ ಪರಶಿವಂ ನೆಲೆವಡೆದ ದಕ್ಷಿ
ಣಾಪಥದ ಮೊಗವಾಡವೆನಿಪ ಬನವಸೆಗೆಯ್ದಿ,
ದಯೆ ದಮಂ ದಾನಂ ತಪಂ ಶೀಲವೆಂಬಯ್ದು
ಬಗೆಯಿಂದ ಮೆಯ್ವಡೆದ ಧರ್ಮವನ್ನೊಲಿಸುತ್ತ
ಪುಣ್ಯದಿಂ ಕಲುಷವಂ ತೊಳೆದು ಹುಟ್ಟಂ ಸಫಲ
ವೆಸಗದೀ ಸಂಸಾರಸಾರಕಾನೆಂತು ಕೈ
ಯೆತ್ತುವೆನು? ವಂಶಕಪಕೀರ್ತಿಯಂ ತೊಡಿಸುವೆನು!' ೬

ರಾಘವನೆದೆಯೊಳಂತು ಬೇರಿಳಿದು ತಳಿರೇರು-
ತರಳಿದಾ ನುಡಿಗೇಳಿ, ನಾಡೋಜನೆನಿಪ ಜನ
ಕನ ಚಿತ್ತವುಮ್ಮಳಿಸೆ ಮೋರೆಮೂಸಿತು. ಶತಾ
ನಂದಂ ನಿರಾನಂದನಾದನಾಳಿಯರ ಪಿಸು
ಮಾತಿಂದಲರಿತ ಸೀತಾಂಗನಾಮಣಿ ಹಿಡಿದು
ಬಿಟ್ಟ ಗುಬ್ಬಿಯವೋಲು ತಳಮಳಂಗೊಂಡಳಾ
ಬೀಡೆಲ್ಲ ಬೆರಗುಬೆಕ್ಕಸದಾಡುವೊಲನಾಯ್ತು! ೭

ಅದನೆಲ್ಲವಂ ನೋಡಿ ಗಾಧಿಜಂ ಗಹಗಹಿಸ
ಲಾ ನಾದಮಂತ್ರದಿಂ ಸಂಶಯಂ ಸಡಿಲುತಿರೆ,
ರಾಮನಂ ತಲೆದಡವುತಾಲಿಂಗಿಸುತ್ತ ಪರ
ಮಾನಂದವೆದೆಯಲ್ಲಿ ಹೊನಲೆದ್ದು ಹರಿಯುತಿರೆ,
ಮುಂದಿಟ್ಟಯಂ ಬೀರುತನಿಬರಾಹಾ ಎಂದು
ತಲೆಯನೊಲೆಯುತ್ತಿರಲು, ಶಿಳಿನುಡಿಯ ತೀರ್ಥದಿಂ-
ದೆದೆಯ ಕೆಸರಂ ಕರ್ಚ್ಚಿ ಕಳೆಯಲುಜ್ಜುಗಿಸಿದನು:— ೮

'ಮೂಡಿ ಧರ್ಮದ ನೇಸರಾಗಿ, ರಾಷ್ಟ್ರಕ್ಕೆ ಪತಿ
ಯಾಗಿ, ನಾಡಂ ಕಾಡನೆಲ್ಲವನೊಂದೆ ಕೆ
ಯ್ಯಿಂದೆ ಸಮಕಟ್ಟುತಾಳಲು, ಬಾಳಿಸಲು, ಮೊಸ
ಲಾಗಿ ನೆಗೆದವನು ನೀನೆಂದಂತರಂಗದ ಸ
ಮಾಧಿಯಿಂದರಿದಿಂತುಟೆಲ್ಲವನ್ನಣಿಗೊಳಿಸಿ
ಕಳೆಗೂಡುವವಸರದ ಲೆಕ್ಕಂಗಳಂ ಸೊನ್ನೆ
ನುಂಗಿದಂತಾಗೆ ಬೇಸರಿಸುತಿಹ ನೂಳ್ಕೆಯಿದು
ಸಲ್ಲದೈ ರಾಘವಾ! ಹೊಲ್ಲದಿಕೆಯೇಂ ತರವೆ?
ವೀರವೈವಾಹಮಂಗಳದಾದಿಯೊಳೆ ಖಳನ
ನುರುಳಿಸಿದ ಬಲ್ವಿಲ್ಲು ನಿನ್ನ ಕೈಸೋಂಕಿನೊಳೆ
ಮುರಿದತ್ತದೇನಮಂಗಳವಾಗೆ ಮಂಗಳದ
ಕುರುಹೆಂತು ಹೊಲಬಾವುದೆಂಬುದನ್ನರಿಯೆಸೈ!
ಶಿವನ ಕೈಪಿಡಿದ ಧನುವೆಂದಿದಕೆ ಮೇಲ್ಮೆಯಾ
ದರೆ ಶಿವಂ ಹಾಲುನೀರಾಗಿ ಸಮರಸವೆನಿಸ
ದಿಹ ವಸ್ತುವಣುವಿಂ ಮಹತ್ತಿನ ವರೆಗೆ ಕೂಡ
ಲಾದ ವಿಶ್ವದೊಳಗೊಂದಾನುಮೇನಿಪ್ಪುದೇ?
ಬಿಲ್ಮುರಿದುದಲ್ಲ—ನಂಜುಗುಳುತಿಪ್ಪಾ ಖಳನ
ಪಲ್ಮುರಿದುದಯ್ಯ! ನಾನಾರೂಪದಿಂದೆ ಬಾ
ಯ್ದೆರೆದು ಲೋಕಂಗಳಂ ತಿಂದುತೇಗುವ ಬೀದಿ
ವರಿವ ಮಾಯಾವಿಕೃತಿಯುಕ್ಕುರ್ಕೆ ತಾನುಡಿದತ್ತು!
ಕರಕೌಶಲಂದೋರಿ ಲಕ್ಷ್ಯಭೇದಂಗೆಯ್ಯ
ಲೆಡೆಯಾಗಲಿಲ್ಲೆನುತ್ತುಮ್ಮಳಂಬಡುವೆಯಾ?
ಪಡಿಸಣಂಗೆಯ್ದೇ ಸ್ವಯಂವರವೆನುವ ಮನಂ
ಜನಕಂಗೆ ಮೇಣು ಕನ್ನಿಕೆಗಾದೊಡಕ್ಕೆ—ಬೇ
ರೊಂದು ಹರಧನುವನೊಪ್ಪಿಸಲಿ! ನಿನಗಾ ಚಿಂತೆ
ಯೇಕಯ್ಯ? ಧರ್ಮದರ್ಪಣನಾದ ಜನಕನಿದೊ
ಮುಂದಿರ್ಪನಲ್ತೆ—ಹವಣರಿತು ಹೊಳೆಯಿಸಲಿ ತಾ
ನೆ'ಂದೆನುತ ಮುನಿ ಮಂದಹಾಸವಂ ಸೂಸಿದಂ. ೯

ಮಾತು ಮುಗಿದುದು; ರಾಮನಂತರಂ ಹಸನಾಗಿ
ತನ್ನೆಡೆಗೆ ಬಾಗಿತೆಂದರಿತನಾ ವೈದೇಹ
ನಾಡಿದಂ: 'ರಾಮ ಕೇಳಾಚಾರ್ಯನೆಂದ ಮೇ
ಲಿನ್ನುಂಟೆ ಕವಲುಕಸರಿಕೆಗಳಂತಾದರೂ
ನುಡಿಯಬೇಕಾದೊಡಿದನೆಂಬೆನಾನಾಲಿಸೈ.
ಕರಕೌಶಲಂದೋರಿ ಬಾಂಗುರಿಯನುರುಳಿಸುತ
ನಿಯಮವಂ ಪಾಲಿಸಲ್ಕಾರದಾದೆನೆನುತ್ತ,
ಬೇವಸಂಗೊಳ್ಳದಿರ್; ಖಂಡಿಯಂ ಪೊತ್ತಂಗೆ
ಬಳ್ಳವೇಂ ಪೊರೆಯೆ? ನಿನ್ನುರ್ಕ್ಕನಾನಲ್ಕಾರ
ದೀ ಬಿಲ್ಲು ಮುರಿದುದೆನಲಂತದಂ ಬಾಗಿಸುತ
ಸರಳ ಸಂಧಿಸಿ ಗುರಿಯನಳ್ಳಿಸುವ ಜಾಣ್ಮೆ ನಿನ
ಗೇನರಿದೆ? ಮೇಣಿಂತುಟಿರ್ಪ ಬೇರೊಂದು ಕೋ
ದಂಡವಂ ತರಲಾರ್ಗ್ಗಮೇನಳವೆನಿಪ್ಪುದೇ?
ಮುನಿಯಂತುಟೆಂದನೆನ್ನಯ ಮನಂ ಮಿಡಿದು ನೋ
ಡಿದನು; ನೆಲದಪವಾದಿಸಂಕುಲದ ಕೊಂಕನೇ
ಕಡಿದನಾ ಮಾತಿರಲಿ—ಸೀತೆಯೆನೆ ನಿನಗಾಗಿ
ಮೊಸಲರಳಿದ ಕೂಸು! ಕೂಳನಾತನನಲ್ಲ-
ಗಳೆಯಲ್ಕೆ, ನೆಲದೆ ನಿನ್ನಯ ಕೈಮೆಯಂ ತನ್ನ
ನಲ್ಮೆಯಂ ಸಾರಲ್ಕೆ, ಧನುವೆತ್ತುವಾ ನಿಯಮ
ವನ್ನವಳೆ ಕಾಮಿಸಿದಳದರಂತೆ ನಡೆದೆನಾ-
ನೆನಗೆ ಮುನಿಮತದಲ್ಲಿ ಕವಲುದೋರದು; ತೋರಿ
ದೊಡೆ ಸೀತೆ ನುಡಿಗೆ—ಮೇಣ್ ನುಡಿಯಂದದಿಂ ನಡೆಗೆ.' ೧೦

ಆ ಮಾತನಾಲಿಸುತ ಬಗೆಗೊಂಡ ರಾಘವನ
ಮುಖಮುಂಡಲದಿ'ನಸ್ತು'ವರಳಿ ಪರಿಮಳಿಸಿತೆಂ
ಬನಿತರಲಿ, ಗೆಲವಕ್ಕೆ ರಾಘವಂಗೆಂದೆಂಬ
ಕನ್ನೆವಾಡದ ಘೋಷವಾವರಿಸೆ ಕೆಳದಿಯರ
ಕಣ್ಣು ಕುನಿಸಲು, ಬೆರಳು ಕೊಂಕಿಸಲು, ಹುಬ್ಬೆತ್ತು

ತಲೆಯಿಸಲು, ಪಿಸುಗುಟ್ಟು ಗಾಳಿಗೂ ರೆಕ್ಕೆಯಂ
ಕಟ್ಟುತ್ತಿರಲ್ಕೊಸಗೆ ಮರುಳೇಳುತಣಕಿಸು
ತ್ತಿರೆ, ನಾಣ ನೇಣು ತನ್ನಡಿಗಳಂ ತೊಡರಿ ಸೆಳೆ
ಯುತ್ತಿದ್ದರೂ ನಡೆಯದಿಹುದೆಂತು? ನೋಡಿವಳ
ವಸ್ಥೆಯಂ! ನಡೆಗೆ ನಡೆ ತಡೆಯಾಯ್ತು! ಹುಲ್ಲೆಬಯು
ಲೊಳಗಾದುದಂಚೆ ಬಿದಿಯೋಲೆಯಾಂತ್ಯೆದಿತ್ತು!
ನೋಡೆನುತ್ತೊಡವಂದು ಪಿಂದುಳಿದು ನಿಂದು ನಾ
ಲಗೆಗುಣಿದು ತಣಿಯದಾಳಿಯರೋರೆಸೊಲ್ಗಳಂ
ಸವಿಯುತ್ತ ಕೈಗೊಂಡ ಮಂದಾರಮಾಲೆಯಲಿ
ಮೈವಡೆದ ನಲ್ಮೆಯೊಬ್ಬಳಿಯೆ ಮರಿದುಂಬಿಗಳ
ಸಾಲಾಗಿ ಜುಂಜುಮಿಸುತಿರೆ, ಧರಾಸುತೆ ಮೆಲ್ಲ
ನಡಿಗೊಂಡು, ವರನ ಕೊರಳೊಳು ಮಾಲೆಸೂಡಿದಳು;
ಬಾಗಿ ನಿಂದಳು; ರಾಘವಂ ಕೈಯ ಮಾಲೆಯಿಂ
ಸಿಂಗರಿಸೆ ರಾಜಲಕ್ಷ್ಮಿಯ ತೆರದೊಳೊಪ್ಪಿದಳು.
ಗೀತವಾದ್ಯಂಗಳೆತ್ತಂ ಮೊಳಗಿದುವು—ಜನದ
ಬಾಯಲ್ಲಿ ಭದ್ರಂ ಶುಭಂ ಮಂಗಳಂ ಮುಗುಳೆ! ೧೧

---

## ಒಂಭತ್ತನೆಯ ಖಂಡ

ಉತ್ತರಾಪಥದ ರಾವಣನ ಕೈವಾರವದು
ಸರ್ವರ ಸಮಕ್ಷದಲಿ ಬಿಲ್ಲಡಿಗೆ ಬಿದ್ದು ಕೆಡೆ
ದುದು; ಮಾನಸಕೆ ಕೆಸರು ಮೆತ್ತಿದುದು; ಮೇಣು ಪರ
ಶಿವನ ಕೋದಂಡವನ್ನೊಂದೂರುಗೋಲಂತೆ
ಮುರಿದಿಟ್ಟನಾ ದಾಶರಥಿಯೆಂಬ ಸುದ್ದಿಯನು
ದೂತನಿಂದರಿದೊಡನೆ, ತನ್ನ ಹೃದಯಾಂಬರದೆ
ತಿತ್ತಿರಿವ ಜೀವಮತ್ಸ್ಯವನುರುಳಿಸದೆ ಮಾಣ
ನೆಂಬ ಸಂಶಯಪಿಶಾಚಿಯೆ ಪಿಡಿದು ತಿರುಗಿಸುವು
ದೆಂಬಂತೆ ಬಾಂದಳವನೇರಿ ಮರೆಯಾಗಿ ಲಂ
ಕೆಯನೆಯ್ದಲೊಲ್ಲದಾ ಮಂತ್ರಿಯೊಡವೆರಸುತ ವಿ-
ದೇಹರಾಜ್ಯದ ಗಡಿಯೊಳಿಳಿದೊಂದು ನೆಲೆವಿಡಿದು
ಮುಂದಾರಿಯನ್ನೆಣಿಸುತಿರಲವನ ಮನದಲ್ಲಿ,
ಜನಕರಾಜನ ಜಾಣ್ಮೆ ಮುನಿಯುದ್ದುರುಟುತನಂ
ತನ್ನಣ್ಣನುಳಿಯೆ ಭಟಸಂಕುಲಂ ಹುಲ್ಲಿಗೆಣೆ
ಯೆಂದು ನೀಕರಿಪ ಲಕ್ಷ್ಮಣನ ಕಡೆಗಣ್ಣು ರಾ
ಘವನೊಂದು ಗಂಭೀರಭಾವವೆಲ್ಲಂ ಕೂಡಿ
ನಂಜಾಗಿ ನರನರಂಗಳನೊಂದಿ ಪಸರಿಸಲು,
ಬಿಲ್ಲಡಿಗೆ ಬೀಳ್ವಲ್ಲಿ ಬಳಿಕೆದ್ದು ಪುಷ್ಪಕವ
ನೇರ್ವಲ್ಲಿ ನೆರವಿ ನಕ್ಕುದನು ಕನ್ನೆಯರು ಕೈ
ಪರೆಗುಟ್ಟಿದುದನೆಣಿಸುತೆಣಿಸುತ್ತ ಬಗೆ ಸುಣ್ಣ
ವಾದುದೇನೆನ್ನುವೆನು! ಮೂಢನಂ ಬಾಗಿಸುವ
ಬನ್ನವೇ ಮೂರ್ಖನೆದೆಯನ್ನುರಿಯಿಸುವುದೆಂಬ
ನುಡಿಗೆ ಕನ್ನಡಿಯಾಯ್ತು! ಹೊಗೆಯುತಿಹ ಬೆಂಕಿಯ-
ನ್ನೂದಿದಂತಾ ಮಂತ್ರಿ ಕಿವಿಯೊಳಗದೇಂ ಮಂತ್ರ
ವಂ ತಂತ್ರದೊಡನೆ ತಾಂ ಬೋಧಿಸಿದನೋ! ಖಳಂ

ಮೊಗವರಳೆ ಸೈಯೆಂದನಿಬ್ಬರೂ ಹೂದೇರ
ನೇರಿ ಸಾರಿದರು; ಸಾಕೇತಪುರಪರಿಸರದೊ
ಳವತರಿಸಿದಾ ಪುಷ್ಪಕದಿನಿಳಿದ ಮಂತ್ರಿಯು
ತ್ತಲು ಸರಿಯೆ, ದೊರೆಯೊಡನೆ ಪಾರಿತ್ತ ಹಾರಿದುದು. ೧

* * *

ಮಾಲ್ಯವಂತದ ಗಿರಿಯ ತಾಪಸಾಶ್ರಮದ ಪರಿ
ಸರದ ನೋಟಂ ಕಣ್ಗೆ ನಾಟಕದ ರಂಗವಾ
ದುದು; ಕಣ್ಣಿನಚ್ಚಿನಲ್ಲಲ್ಲಿಗಲ್ಲಿಗೆ ರೂಪು
ಗೊಂಡುದು. ತಳಿರ್ಗೆ ಬಣ್ಣಂಬಳಿವ ಕೋಗಿಲೆಯ
ಕಣ್ಣಲೆಯೆ, ತಾವರೆಯ ಪರಿಮಳಕೆ ಬೆಲೆವೇಳ್ವ
ತುಂಬಿಗಳ ಗಳನಾದವಾವರಿಸೆ, ಮಾಂಬಳದ
ರಸಭಾವವಂ ಟಿಪ್ಪಣಿಸುವ ಕನ್ನಡವಕ್ಕಿ
ಗಳ ಮಾತು ಚೆಲ್ವಾಗೆ, ತೋರಣಂಗಟ್ಟಿದಂ
ದದೆ ಬೆಳೆದ ಹೆಮ್ಮರಂಗಳ ಸಾಲುಗಳ ನಟ್ಟ
ನಡುವೆ ನೇರಾಗಿ ಹರಿವಾ ದಾರಿ ಗುರಿದೋರ್ಪ
ಗುಡಿಸಲಿನ ಮೆಟ್ಟಿಲನ್ನಿಳಿವ ಭವ್ಯಾಕಾರ
ದೊಂದಪೂರ್ವವ್ಯಕ್ತಿ ಕಣ್ಗೆ ಕಾಣಿಕೆಯಾಯ್ತು! ೨

ತೊವಲಿನುಡೆ ಜಪಸರಂ ದಂಡಂ ಕಮಂಡಲಂ,
ಪರೆದ ಜಡೆಗಳ ನಡುವೆ ಹೊಳೆವ ಮುಖಮಂಡಲಂ,
ನಾಲಗೆಯ ಸರವಿಡಿದು ತಿರುಸೊಲ್ಲಿನಕ್ಕರಂ-
ಗಳನೆಣಿಸುತಿಹ ಮಾನಸಂ ಮನಂಗೊಳಿಸುತಿರೆ,
ಮಾನಸದಿನಿಳಿದು ಬರುವಾ ಹಂಸನೆಂಬವೋ
ಲೈತರುವ ಮುನಿಯ ಬರವಂ ಕಾಣುತಾಗಸದ
ಪುಷ್ಪಕಂ ಸಪ್ಪುಳಿಲ್ಲದೆ ನೆಲಕ್ಕವತರಿಸಿ
ದುದು; ನೆತ್ತಿಯಲ್ಲಿ ಮುಗುಳಾದ ಕೈಯೊಡನೆ ರಾ
ವಣನಿಳಿದು ಭಯಭಕ್ತಿ ಮೊಗದೆ ನಲಿಯಲ್ಕಯ್ಯ
ನಡಿಯೆಡೆಯ ಮರಳೊಳೋಂಕಾರವಂ ಬರೆವನೆಂ-

ಬಂದದಿಂ ಮೆಯ್ಯನೀಡಾಡಲು 'ನಮಶ್ಶಿವಾ
ಯ'ದ ಮಂತ್ರದಿಂ ಹರಸಿ ಮುನಿನಾಥನುಸುರಿದನು:— ೩

'ತೆಂಕನಾಡಿನ ಗಂಟೆವಣಿಯೆ ಮೂಗಾಲವೂ
ಬಲ್ಮೆಯೊಂದಾಳಿಕೆಗೆ ಕಣಿಯಾಗಿ ಹುರುಳಿನೊ
ಳ್ಮಣಿಯಾಗಿ ಮಿರುಗುತಿಹ ನಿನ್ನ ಮೋರೆಯಿದೇನು!
ಮುಸಿಗರಡಿ ತೋಂಕಿದಂತಿಹುದಿದಂ ನೋಡಿದರೆ
ಕಣ್ಣಳುಕುವುದು! ಹರದಯ್ಯಾರಸಂ ಬತ್ತಿತ್ತೆ?
ಮನವಂಜುವುದು! ನಾಡಿನಾಳ್ತನಕ್ಕೆಡರಾಯ್ತೆ?
ಸೋದರರದೇಂ ಭೇದವಡೆದರೇ? ಮೇಣ್ ಹಿರಿಯ
ರಾದವರ ಹರಕೆಯುಂತರ್ರವದೇಂ ಕದಡಿತೇ?
ನಿನ್ನನಿನ್ನಾನೆಡರುಗಿಡರಡಸಲಾಪುದೈ?
ಸುರರು ನರರಂತೆ ಕಿನ್ನರರೆಂಬರೆಲ್ಲರೇ-
ನೀ ಚಂದ್ರಹಾಸದಿದಿರಲ್ಲಿ ತಲೆಯನ್ನೆತ್ತ
ರೆಂದ ಮೇಲಚ್ಚರಿಯಿದಲ್ಲವೇ? ಹೇಳುಹೇ
ಳೆ'ಂದೆಂಬ ಮುನಿಪಾರ್ಗಳಂಗೆ ಬಿನ್ನವಿಸಿದನು:— ೪

'ಮುನಿರಾಜ ನಲ್ಮೆಯಿಟ್ಟಾಲಿಪುದು. ಮಾದೇವ
ನೊಲವಿಂದ ನಿನ್ನಡಿಯ ಬಲದಿಂದಲೀ ವಿಶ್ವ
ವಸುವಿನ ಕುಮಾರನಾಳಿಕೆಯನಾ ಬನ್ನಗಳೊ
ಳಾವುದೂ ಕಿಂಕಿರಿಸಲಿಲ್ಲೆಂಬುದಂ ನಿವೇ
ದಿಪೆನಾದರೇನು?—ನೀಂ ಸರ್ವಮಂ ಬಿಟ್ಟು ಸ
ನ್ಯಾಸಶಿಖರದ ಶಮದಮಾದಿ ನಿಶ್ರೇಣಿಯ
ನ್ನೇರುತ ಸಮಾಧಿಕಲಶಂದುಂಬಿತುಳುಕುವಾ-
ನಂದದೊಳು ಸಮರಸಂಬೆರೆಯುತ್ತ ನಾದವುಂ
ಬಿಂದುವುಂ ಕಳೆಯುಮೆಂದೆಂಬ ಮೂಗವಲೊಂದು-
ಗೂಡಿ ವಿಶ್ವಕ್ಕೆ ಚೈತನ್ಯವಾದಾ ಧರ್ಮ
ಸಾರವಂ ಹೀರಿ ಮೈಗೊಂಡು ಭೋಗಿಗೆ ಯೋಗಿ

ಮರುಳಾಗಿ ಕುಣಿಯತೊಡಗಿದ ಮೇಲೆ—ಸರ್ವವೂ
ಪರಮಾತ್ಮರೂಪೆಂದು ನಲಿಯತೊಡಗಿದ ಮೇಲೆ
ನೆಲವನಾಯಕವಾಗೆ, ಜನಸಂಕುಲಂ ಕಂಡ
ಬಟ್ಟೆಯೊಳು ಕಾಲನಿಡಲದುವೆ ಕಾಲವೆನುತ್ತ
ನಾಗನಂತೊಳಹೊಕ್ಕ ನವನಾಯಕರ ಕುಲಂ
ಹಬ್ಬಿದುದು! ನಾಡಾಡಿ ರಾಯಗುವರರು ತಲೆಯು
ನೆತ್ತಿದರವರ ಕೆಯ್ಯ ತಾಳಕ್ಕೆ ತಕ್ಕಂತೆ
ಕುಣಿವಾರ್ಯಕುಲಜರೆಂಬಾ ಮಂತ್ರಿಗಳ ಕರ್ಣ
ಮಂತ್ರವೇರಿತ್ತರಾಜಕವಾಯ್ತು ಜಗವೆಲ್ಲ!
ನೀಂ ನಂಬಿದಾದಿದೇವನ ಪಟ್ಟಶಿಷ್ಯನಾಂ
ನಿನ್ನಂತೆ ಮುನಿಪುತ್ರನಲ್ತೆ? ನೀಂ ಕೈದೊರೆದ
ನಾಡಂತಧರ್ಮಕ್ಕೆ ಹೊಲನಾದುದಂ ಕಂಡು
ಮನಮುರುಗಿ, ಧರ್ಮವನ್ನುದ್ಧರಿಪ ಗುರಿವಿಡಿದು,
ತೆಂಕನಾಡಿನ ಕಂಟಕಂಗಳಂ ಕಿತ್ತೊಗೆಯು
ತುತ್ತರಾಪಥದೊಳೂ ಕಾಲಿಟ್ಟು ಕೋಟೆಕೊ
ತ್ತಳಗಳಂ ಸಾವಂತರಂ ನೆಲೆಗೊಳಿಸಿ ನೀತಿ
ಗೊಂದು ಕಳೆಗೊಡುವಲ್ಲಿ, ಕೈದೊಳಸುತಿಪ್ಪಾರ್ಯ-
ವೇಷಭಾಷಾಮಂತ್ರಿಗಳ ಕುತಂತ್ರಾಂತರಂ-
ಗಂ ಕುದಿಯತೊಡಗಿತಬ್ರಹ್ಮಣ್ಯನಾದವಾ
ವರಿಸಿತ್ತು! ರಕ್ಕಸನ ಕೈವಾರದಿಂದ ಕಲಿ
ಯುಗವದೋ ಬಂದುದಿದೊ ತಿಂದುತೇಗಿತು ಧರ್ಮ
ವನ್ನೆಂಬ ಡಂಗುರಂಬಾರಿಸಿತು ನಾಡಿನಲಿ!
ನೀಂ ನಾಡ ಕಡಿಯಣಂಬಿಡಿದಿದ್ದ ಕಾಲದೊಳ್
ಕ್ಷತ್ರಿಯಾಸುತನೆಂದು ನಿಂದಿಸಲ್ಕೆದೆಯಳುಕು-
ತೊಳಗೊಳಗೆ ಮಂತ್ರಿಸುತ್ತಿದ್ದ ಮಂತ್ರಿಗಳಿವರು
ತಲೆಯೆತ್ತುತೀಗಳೆನ್ನಂ ರಕ್ಕಸಿತಿಯಣುಗ
ನೆಂಬರೇನುದರಂಭರಿಗಳೊ! ತಾಂ ಕೈಗೊಂಡ
ನೂಲೆನಿಪುದೇ ಧರ್ಮಸೂತ್ರವಾ ನೂಲಿನಲಿ

ಕಟ್ಟುವಡೆದಲುಗಿದಂತತ್ತಿತ್ತ ನಲಿದಾಡು
ತಿಪ್ಪ ನಾಡಾಡುವರಮುಗನಹನೆ ರಾವಣಂ?
ಆದರೂ ಗಂಟೆಗೊಂದೇ ಸರವದೆಂಬಂತೆ
ಕಿರುಕುಳಂಗದಡುತಿಹ ಮುನಿಗಳೆಂಬವರ ಬೊ
ಬ್ಬಾಟಕ್ಕೆ ಬೇಸತ್ತು ಬರಡಾಗುತೆಲ್ಲವಂ
ನಿನ್ನೊಳೇ ಬಿನ್ನವಿಸಿದೆಂ; ಹಸಾದವದೇನು
ಸನ್ಯಾಸವೋ? ರಾಜ್ಯವಿನ್ಯಾಸವೋ? ನಿರೂ
ಪಿಸಬೇಕೆ'ನುತ ಪರಶುರಾಮುನಡಿಗೆರಗಿದನು. ೫

ರಾವಣನ ನುಡಿಗೇಳಿ ಭಾರ್ಗವನ ಮುಖಮುಂಡ
ಲದಿ ತೊಳಗಿ ಬೆಳಗುತಿದ್ದಾ ಶಾಂತತಾಭಾವ
ನೆಯ ಕಳಾರೇಖೆಗಳು ಮಾಸಿ ಮಸುಳಿಸಿ ಬೇರೆ
ಚಿತ್ರಂಗಳಂ ಬರೆಯಲಣಿಯಾದುದನಿತರಲಿ
ಬೆಪ್ಪುಬೆರಗುಗಳ ಬಣ್ಣದ ಮೇಲೆ ಕೆಂಗಿನಿಸಿ
ನೆಳೆಗಳಲ್ಲಲ್ಲಿ ನೀಳ್ದಿವೆಯಲುಗುವಲ್ಲಿ ಪಸ
ರಿಸೆ, ಮೋರೆ ನೇಸರಿನ ಬಟ್ಟನಂತೆವೊಲಾಯ್ತು!
ದೆಸೆದೆಸೆಗೆ ಸುಯ್ಲ ಹೊಗೆ ಭುಗುಭುಗಿಲುಭುಗಿಲೆಂದು
ಸೂಸಿದುದಭೂತಪೂರ್ವವೆನಿಪ್ಪ ಭೀಷಣಾ
ಕೃತಿಯದನ್ನೀಕ್ಷಿಸುತ್ತಾಶ್ರಮನಿವಾಸಿಗಳು
ಬೆಗಡಾಗೆ, ರೇಣುಕಾತನಯನಿಂತುಸುರಿದನು:— ೬

'ವೇದಂಗಳೇ ಕೆಯ್ಯ ಕನ್ನಡಿಯೆನಿಸಲೆಮ್ಮ
ಮಾದೇವನಂತರದೊಳೆರಕವಾಗುತೆ ನಾಡ
ನೆಲ್ಲವನ್ನೊಂದು ಮನೆಸಾಳ್ತೆಯನ್ನಾಗಿಸುತ
ಶಾಂತತಾಭಂಗಕೆಡೆಗೊಡದಾಳ್ವ ನಿನ್ನ ನಡ
ವಳಿಯೊಳಾವಂ ಕಂದುಗಾಂಬವಂ? ಮೇಣು ಕುಲ
ದಡಿಯೊಳಾವಂ ಕುಂದನರಸುವಂ? ಮುನಿಯಾದ
ರೇನು ದೊರೆಯಾದರೇನಾತನೀ ಪರಶುಧರ

ನೀಗಳೂ ಮೆಯ್ಗೊಂಡಿಹುದನದೇಂ ಮರೆತನೇ?
ದುರುಳರಿಪ್ಪತ್ತೊಂದು ಬಾರಿಯಂತಾದರೆಂ-
ಬಾ ಕತೆಯನಾತಂಗೆ ಪೇಳ್ವರೇನಿಲ್ಲವೇ?
ಧರ್ಮದಿದಿರಲ್ಲಿ ಸೋದರರೆಲ್ಲಿ? ತಾಯೆಲ್ಲಿ?—
ಪೋಪೋಗು, ತಂದೆಯೂ ತಾನೆಲ್ಲಿಯೆಂಬಲ್ಲಿ
ಸದ್ಧರ್ಮವಂ ಸಚ್ಚಿದಾನಂದವಂ ವಿಶ್ವ
ಚೈತನ್ಯವಂ ತೆಗಳುವವರಾರವರ ಹೆಸರು
ಗಳನೆಂಬುದಯ್ಯ; ಕತೆಗಿತೆಗಳಂ ಕೇಳಲ್ಕೆ
ಕಾಲವಾಗ್ಗಿಪ್ಪುದುಸುರುಸುರೆ'ಂಬ ರೇಣುಕಾ
ಸುತನ ಮೊಗವಂ ನೋಡಿ, ಮನದೊಳೇ ಮಂತ್ರಿಯುಂ
ಕೊಂಡಾಡಿ, ತನ್ನ ಜಾಣ್ಮೆಗೆ ತಾನೆ ಮೆಚ್ಚುತ್ತ,
ಬಗೆಯ ದುರ್ಯುಕ್ತಿಯಂ ಮೊಗದ ಭಯಭಕ್ತಿಯಿಂ
ಮುಸುಕುತ್ತ ರಕ್ಕಸಂ ನುಡಿದನೀ ತೆರದಿಂದ:— ೭

'ಮುನಿದೇವ ನಿನ್ನಡಿಗೆ ಮುನಿದಾವನೇವನೆಂ
ಬುದನರಿತು ಬಿನ್ನವಿಸಿದೆನ್ನ ಜೀವನವೆ ಸಂ
ಜೀವನಂ. ನಿನ್ನ ಕಡೆಗಣ್ಣೊಂದು ನೇರಾಗಿ
ನೋಡುತಿದ್ದರೆ ಸಾಲದೇ?—ಭರ್ಗನಾಳಾಗಿ
ಚಂದ್ರಹಾಸಾಸಿಯಿಂ ಕೈಯಲದರ್ೀ ಕೈಕ
ಸಾಸುತಂ ಜಂಜಡಿಪ ಕೂಟಕುಳಿಗಳ ಜಂಗು
ಳಿಗೆ ಜಿನುಗುವನೆ? ಧರ್ಮಕೊಂದು ಕಳೆಯಂ ಕೊಡವೆ
ಬಿಡುವನೆ? ಕವಲ್ನುಡಿಯ ಸಿಪ್ಪೆಯಂತಿರಲಿನ್ನು
ತಿರುಳನಾಲಿಸು. ಗಾಧಿಸಂಭವಂ ಮುನಿಯೆನ್ನಿ-
ಸಿದ ಮೇಲೆ ಮರಳಿ ಹಗೆಯಾದಾ ವಸಿಷ್ಠನೊಡ-
ನೊಂದಾಗಿ ಜೋಡುಬೂತಗಳೋಲಗಂಗೊಂಡು
ರಿಂಗಣಂಗುಣಿದಾರ್ಯಕುಲದ ಲಕ್ಷಣವಿಂತ-
ನಾರ್ಯರೊಡ್ಡಿನ ಮೆಯ್ಯದಿಂತೆಂದು ಸಾರುತ್ತ,
ರಕ್ಕಸರನಾ ಬೆಳ್ಪರೊಳೆ ಬೆರಸುತವದಿರಂ

ನೆಲದಿಂವ ಕಿತ್ತೊಗೆವ್ರುದಾರ್ಯರ್ಧರ್ಮವೆನುತ್ತ
ನಿರ್ಧರಿಸಿ, ದಶರಥನ ಸುತರಾದ ರಾಮಲ-
ಕ್ಷ್ಮಣರೆಂಬ ಕುವರರಂ ಮುಂಮಾಡಿ ಹೆಂಗುಸರು
ಗಂಡುಸರೆನುವ ಭೇದವನ್ನುಳಿಯುತಿದಿರಾದ
ದಾನವರನೆಲ್ಲ ಸದೆಯಲ್ನಿರೂಪಿಸಿದನೇ-
ನೆಂಬೆನವರೊಡನೆ ಸಾಕೇತದಿಂದೆಯ್ತರಲು,
ಸಿದ್ಧಾಶ್ರಮದ ಪರಿಸರದಲಿ ದುರ್ಗಂಬಲಿದು
ಬಹುಕಾಲದಿಂದ ನೆಲೆವಡೆದೆನ್ನ ಸಾಮಂತ
ವರ್ಗದೊಳಗಿನ ತಾಟಕಾಂಗನೆಯೆ ರಾಘವನ
ಮೊತ್ತಮೊದಲಿನ ಧರ್ಮಯಜ್ಞಕಾಹುತಿಯಾದ
ಳಾಮೇಲೆ ಬಲಿಯಾದವಂ ಸುಬಾಹು; ಬಳಿಕ್ಕೆ
ಪರಿಪರಿಯ ಹಿಂಸೆಗಳನಾಚರಿಸುತಬಲರೆಂ-
ದೆನಿಪ ರಕ್ಕಸರನೆಲ್ಲಂ ಹಿಂಡಿಹಿಳಿಯುತ್ತ
ಹೊನಲಾಗಿ ಹರಿಯುತಿಹ ರಕ್ತರಸದಿಂ ರಸಿಕ
ನಾದಂ ಗಡಾ ಗಾಧಿಪುತ್ರನಿದು ಹೊಸದೊಂದು
ಧರ್ಮಂ ಗಡಾ! ಹೋಗಲಾ ರಕ್ಕಸರು ತಿಳಿಯ
ದಾಶ್ರಮದೊಳಿನಿತನಿತ್ತಪರಾಧವಂ ಗೆಯ್ದ
ರೆಂದಾದರೆನ್ನೊಳೇನೊರೆಯಬಾರದೆ? ಧರ್ಮ
ವಂತಲ್ಲವೇ? ತಪ್ಪನೆಸಗಲೆನ್ನವರೆಂದು
ಸುಮ್ಮನಿಹೆನೇ? — ಹಲವನೆಂದು ದಣಿಸುವುದೇಕೆ? ೮

ನುಡಿಯುದ್ದವಾಗದಂದದಲಿ ಸಂಗ್ರಹವಾಗಿ
ಬಿನ್ನಯಿಪೆನಿದು ನೀಳವಾಗಿ ತೋರಿದೊಡೆ ಮ
ನ್ನಿಸಬೇಕು; ವಿಷಯಸಾರಂ ಮನಕ್ಕಳವಡುವ
ಮಾಳ್ಕೆಯಿಂ ಹೇಳದೊಡೆ ಭಾವಿಸಲ್ಕೆಂತಹುದು?
ರಾಜರ್ಷಿವೆಸರಾಂತ ಮೈಥಿಲಂ ಜನಕನೇಂ
ನೀನರಿಯದಾತನೇ? ನಿಮ್ಮನ್ನರೊಲುಮೆಗೊಂ-
ಡಿಳೆಯೊಳರಸೆಂದು, ಗುರುವೆಂದು, ಪೆಸರಾಂತನಂ

ಕನ್ಯಾಸ್ವಯಂವರದ ಹೆಸರಿಟ್ಟು ಡಂಗುರಂ
ಬಾರಿಸುತ್ತೋಲೆಯೊಕ್ಕಣೆಯಿಂದೆ ಮಾನ್ಯರಾ
ಜನ್ಯರಂ ಬರಿಸಿದಂ. ಮಿಥಿಲಾಪುರಂ ನೆರವಿ
ಗೂಡಿತ್ತು; ಸುಮುಹೂರ್ತವಂ ನಿರೀಕ್ಷಿಸುತಿತ್ತು.
ಗುರುವರ್ಯ ಕೇಳ್ ಜನಕ-ಕೌಶಿಕರ ಕೌಳಿಕದ
ಸೂತ್ರವಂ; ರಾಮಂಗೆ ಸೀತೆಯಂ ಕೈವಿಡಿಸು-
ತುಭಯಪ್ರಬಲರಾಜಕುಲವನೊಂದಾಗಿಸುತ
ರಕ್ಕಸರನೆಲ್ಲರಂ ಸದೆಯಬೇಕೆಂಬ ಕೀ-
ಳ್ಗರಿಯೊಂದೆ ತಾನಿಲ್ಲಿ ಪಲ್ಲವಿಸಿ ತೋರುತಿದೆ.
ಮಿಥಿಲೆಗಾ ಕೌಶಿಕಾದಿಗಳೆಯ್ದುವವಸರಂ-
ದಿಳಿದು ಬನ್ನಂಬಡೆದ ನಮ್ಮ ರಕ್ಕಸಬಲಂ
ಬಲಿದೊಂದುಗೂಡುತವರಂ ದಾರಿಯಲಿ ತಡೆದ
ರಂತೆ, ಮೇಣ್ ತಡೆದು ಭಾವಿಸದ ಬವಣೆಯೊಳು ತೊಡ
ರಿಸಿದರಂತದರಿಂ ಮುಹೂರ್ತಕಾಲಂ ಮೀರ
ಲದನರಿದ ಜನಕನೇಂ ಸಾಮಾನ್ಯನೇ! ನೆರೆದ
ರಾಜಕದ ಕಣ್ಗೆದೆಯ ಪೆಟ್ಟಿಗೆಯಿನಿನ್ನೊಂದು
ಧರ್ಮಸೂತ್ರದ ಹಾವನೆತ್ತಿ ಹೆಡೆಯಾಡಿಸಿದ
ನದರಿಂ ಸ್ವಯಂವರಂ ತಡೆಗಟ್ಟಿ, ಮರುದಿನಂ
ಶಿವಧನುವನೆತ್ತಿ ಯಂತ್ರಚ್ಛೇದವೆಸಗಿದಂ-
ಗೀವೆನಾಂ ಮಗಳನೆಂದಂ ಗಡಾ! ಕನ್ನೆಯೇ
ವರನಂ ಸ್ವಯಂವರಿಸಬೇಕೆಂಬ ಕಟ್ಟಳೆ ಸ
ಡಿಲ್ದು, ಬಲವಂತನಾದಂ ಕನ್ನೆಯಂ ಸ್ವಯಂ-
ವರಿಪುದೆಂಬಪವಾದ ಸೂತ್ರದಿಂದಾ ರಾಜ
ಋಷಿ ಧರ್ಮಶಾಸ್ತ್ರವಂ ಹೆಣೆದು ಕಟ್ಟಿದನಂತು! ೯

ಅವರವರ ತಪ್ಪಿಗವರವರೆ ಭಾಗಿಗಳೆಂಬು
ದಾತ್ತಭಾವದೊಳನ್ನೆಗಂ ಸುಮ್ಮನಿದ್ದೆನಾ
ದರೆ ತಮ್ಮ ತಪ್ಪನನ್ಯರ ಮೇಲೆ ಹೊರಿಸುವೊಂ

ದಪರಾಧವನ್ನೆನ್ನ ವಂದಿಗಂ ದೊರೆ ಕಂಡು
ಸುಮ್ಮನಿರಸಲ್ಲದೆಂದೆಣಿಸಿದೆಂ; ಮರುದಿನಂ
ಕೌಶಿಕಂ ರಾಮಲಕ್ಷ್ಮಣರೊಡನೆ ಸಭೆವೊಕ್ಕ-
ನಾಮೇಲೆ ನಡೆದ ಗೊಂದಳಗಳಂತಿರಲಿ—ಹೇ
ಳುವೆನೊಂದನೇ! ರುದ್ರಧನುವನೇಂ ರಾಘವಂ
ಬಾಗಿಸಿದನೇ? ನಾರಿಯಂ ತೊಡಿಸಿದನೆ? ಬಾಂದ
ಳಂದಿರಿವ ಮೀನನೇಂ ತುಂಡಿಸಿದನೇ? ತಾನಿ
ದಾವುದೂ ನಹಿ ನಾಸ್ತಿ! ಶಿವನ ಕೋದಂಡವಂ
ಪಿಡಿದತ್ತಲಿತ್ತ ಹೊಡಕರಿಸಿ ಮುರಿದಿಕ್ಕಿದಂ! ೧೦

ಹೂಂಕಾರದೊಡನದೇನೇಂಗೆಯ್ದನೆಂದು ಮುನಿ
ಮೂಂಕರಿಸೆ, ಗುರುವರಾ ಸ್ಫೈರಿಸುವುದರೆನಿಮಿಷ
ವೆತ್ತಿದ ನುಡಿಯ ಮುಡಿಯನಿದೊ ಕಟ್ಟನುಗಿಸುವೆನೆ
ನುತ್ತಲೆದೆವಲಿದ ಮಾತಂ ಮುಂದುವರಿಸಿದನು:— ೧೧

‘ಧನು ಮುರಿಯೆ, ಗಾಧಿಜಂ ಕೊಂಡಾಡಿದಂ; ಜನಕ
ನೆದೆಯೇರಿದಂ; ಮತ್ತೆ ಕೂಟಕುಳಿಗಳ ನೆರವಿ
ಮಿಡುಕಲಾಪುದೆ? ಮನಂಬೆದರಿ ಜಯಜಯವೆಂದು
ಬಾಯ್ದೆರೆದುದನಿತರಲಿ ಸೀತೆ ಮಾಲಿಕೆಯಿಕ್ಕೆ,
ಮದುವೆಗಂ ಕತೆಗಮಾಯ್ತಂತು ‘ಮಂಗಳಮಸ್ತು’.
ಮದುವೆಗಿದುವೆಯ ಕತೆಗಳೆಲ್ಲವಂ ಕಟ್ಟಡುವೆ-
ನವರ ಧರ್ಮಸ್ವರೂಪಕೆ ಮನಂಬೆಚ್ಚಿಹೆನು!
ನಿನ್ನನೊಲವಿಂದೆ ಕೈಕೊಂಡಾ ಧನುರ್ವೇದ
ವಂ ಕಲಿಸಿ ನೆಲಕೆ ಬಿಲ್ಲೋಜನನ್ನಾಗಿಸಿದ
ಪರಮಗುರುವಿನ, ಮೇಣೆನಗೆ ಚಂದ್ರಹಾಸವಿದ
ನಿತ್ತು ತಲೆಮುಟ್ಟಿ ಹರಸಿದ ಮಹೇಶನ, ಕೆಯ್ಯ
ಕಾರ್ಮುಕಕ್ಕೀ ಭಂಗವಾದುದನ್ನರಿತೆನ್ನ
ಮಾನಸಂ ಬಿರುಗಾಳಿಯಾಗಿ ಬೀಸಿದುದೊಮ್ಮೆ!

ಸುಳಿಗಾಳಿಯಾಗಿ ಸುಳಿದತ್ತೊ ನಮ್ಮ! ಕಡೆಗೆ ತಿಳಿ
ಗಾಳಿಯಾದತ್ತೆಲ್ಲವಂ ನಿನ್ನಡಿಗೆ ನಿವೇ
ದಿಸಿ ನಿರೂಪಂಬಡೆಯಲೆಂದೆನುತ ಬಂದಿಹೆನು.
ಗುರುವಾಗಿ ಕಲಿಸಿದುದನೀ ಶಿಷ್ಯನನುವಾಗಿ
ಕಲಿವಂ, ನಮಸ್ತೇ!' ಎನುತ್ತ ಕಾಲ್ಗೆರಗಿದನು. ೧೨

ಆ ಮಾತನಾಲಿಸಿದ ಭಾರ್ಗವನ ಕಣ್ಣು ಮಿಂ
ಚಿನ ಗೊಂಚಲಂ ಕೆದರಿದುದು! ಕೊರಳು ಗುಡುಗನು
ಗ್ಗಡಿಸಿತ್ತು! ದಂಡಂ ಕಮಂಡಲುಗಳೆಂಬಿವ
ನ್ನುಳಿದನಾಣತಿಯ ಸನ್ನೆಯನರಿತ ಮಾಣವಕ
ರುಟಜದಿಂ ತಂದಿತ್ತ ಕೈದುವಲ್ಲಂ—ಕೋಪ
ಶಿಖೆಗಳೇ ಕೊಡಲಿಯೆನೆ ವ್ಯೆವಡೆದು ಕೈಯಲ್ಲಿ
ಸನ್ನಿಹಿತವಾಯ್ತೆಂಬೆನಾ ಕೆಯ್ಯ ಮೆಯ್ಯ ಸು
ಯ್ಯಂದವಂ ಬಣ್ಣಿಸಲು ಬಾಯ್ದೆರೆದರೆಗ್ಗನಾ
ಗೆನೆ! ಹೂಂಕೃತಿಗೆ ನೆಲಂ ಬಿರಿಯೆ, ರಾವಣನ ಮೊಗ
ವಂ ನೋಡಿ ನುಡಿದನಾ ಸೊಲ್ಲುಗಳ ಹರಟೆಯಂ-
ತಿರಲೊಂದನೇ ಕೇಳ್ವೆನೆಲವೊ, ಗುರುವಾದ ಮಾ
ದೇವನ ಧನುರ್ಭಂಗದೊಡನೆನ್ನ ಮಾನಭಂ
ಗಂಗೆಯ್ಯೆ ಕೈನೀಡಿದಾ ರಾಮನೆಂಬನೆ
ಲ್ಲಿಹನೀಗ? ಹೇಳೆನಲು, ರಾವಣನ ದೂತನೊ-
ಬ್ಬಂ ಬಂದು ಮರುದಿಬ್ಬಣಂಬೆರೆದು ದಶರಥಂ
ಮಿಥಿಲೆಯಿಂ ಹೊರಟರುವನೆಂದು ಬಿನ್ನವಿಸಲ್ಕೆ,
ಹೂಂಕಾರವೊಂದು ಘೀಂಕರಿಸೆ ನೆಲವಂ, ಭಾರ್ಗ
ವಂ ಕಾರಮುಗಿಲಾಗಿ ಸಿಡಿಲೆದ್ದು ಸಾಗಿದನು! ೧೩

ರೇಣುಕಾಸುತನತ್ತ ಸಾರೆ, ರಕ್ಕಸರಾಯ
ನಿತ್ತ ಪುಷ್ಪಕವೇರಿ, ಮರಳಿ ಸಾಕೇತಸೀ
ಮಾವನಿಯ ಬನದ ಸಂಕೇತದೆಡೆಯಲ್ಲಿಳಿಯ

ಲಾದ್ದುದು; ಕುಜಂಗೆ ರಾಹುವಿನ ಸಂಧಾನವೆಂ
ದೆನೆ ಮಂತ್ರಿ ಕೂಡಿದಂ; ದೊರೆಗೆಯ್ದು ನೀತಿಸಾ
ರವನು ಮುಖಭಾವದಿಂ ಬಗೆದು ಬಿನ್ನಯಿಸಿದಂ:— ೧೪

'ದೇವ ಕೇಳುಜ್ಜುಗಂಗೆಯ್ದರೂ ವೋರೆಯಲಿ
ಸಂಶಯದ ವೊಳೆ ತೋರ್ಪುದಾತ್ಮವಿಶ್ವಾಸವಂ
ಕೊಯ್ಯು ಗರಗಸವೆದೆಯೊಳತ್ತಿತ್ತಲಲೆಯುತಿದೆ;
ಮೂಗುದುರಿಸಲ್ಕೆದೆಗೆದದ್ದುರಿಂಗಣಗುಣಿವ
ಬೆಪ್ಪನಾದಾ ಮುನಿಯನೆಂತು ನಂಬುವುದೆಂದು
ಸಂದೇಹಗೊಂಡಂತೆ ತೋರುತಿದೆ. ಕವಲೇತ
ಕಿನ್ನು?—ಸಾಕೇತಕುಳಿವಿಲ್ಲ! ರಾಮಂಗಾಳ್ಕೆ
ಯಿಲ್ಲ! ದಶರಥನ ಮನವಾಗಿ ನಡೆನುಡಿಯಾಗಿ
ನೆಲವನಾಳಿಸುವಾಕೆ ಕೈಕೆಯೆಂದೆಂಬ ಕಿರಿ
ಯರಸಿಯುವಳನ್ನೊಂದು ನೂಲನಾಗಿಸುತ ಬೆಂ
ಬಿಡಿದಾಡಿಸುವಳು ಮಂದರೆಯೆಂಬ ಬಗೆಗೆಳದಿ;
ಬಲಿಶಂಬರರ್ಕಳೆಂದೆಂಬ ರಕ್ಕಸರನಿ
ಬ್ಬರನೊರಸುವಂದಲ್ಲಿ ಕೈಕೆಯೆಸಗಿದ ಸಾರ
ಥಿತ್ವಕ್ಕೆ ಮೆಚ್ಚಿ, ದಶರಥನೆರಡು ವರಗಳ
ನ್ನಾಕೆಗಿತ್ತಂ, ಮೇಣವಳ್ಗೆ ತನುಮನಗಳಿಂ
ವಶವಾಗಿರುವನೆಂಬುದನ್ನರಿತು ಕಡುಜಾಣೆ-
ಯಾ ರಕ್ಕಸರೊಳು ಕಿರಿಯನ ತನೂಭವೆಯಾಕೆ
ದಶರಥಂ ತನ್ನಯ್ಯರಿಬ್ಬರಂ ಕೊಂದು ಹಿಂ-
ದಿರುಗಲ್ಕನಾಥೆಯೆನ್ನಂ ಪೊರೆವುದೆಂದು ವೊರೆ
ಯಿಟ್ಟು ಕಾಲ್ವಿಡಿದು ಕೈಕೇಯಿಯೊಲವನ್ನಾಂತು
ನಟಿತಂದಯೋಧ್ಯೆಯೊಳಪೊಕ್ಕಂದಿನಿಂದಿಂದು
ವರೆಗೀಗಳೂ ಹಾಲಿನಲ್ಲಿ ನೀರಾಗಿ ರಾ
ಣಿಯ ಮನಂಬೆರೆದೊಂದುಗೂಡಿ, ಕಾಲವನೀಕ್ಷಿ
ಸುತ್ತಿಪ್ಪಳವಳೆದೆಯ ಪಾತ್ರವನ್ನೊಲಿಗಿಟ್ಟು

ಬಂದಿಹೆನು! ಕಾಲದಲ್ಲದು ಕುದಿಯುತುಕ್ಕುಹೊಗು
ವಂತೆ ನೀತಿಯ ಕೈಯನಣೆಗೊಳಿಸಿ ಬಂದಿಹೆನು!' ೧೫

ಸಚಿವನರುಹಿದ ಸೊಲ್ಲನಾಲಿಸುತ ಶಿರವನೊಲೆ
ದೊಲೆದೆಂದನೆಲೆ ನೀತಿವಿದರೊಳಗ್ಗಳನೆನಿಪ
ಮಂತ್ರಿಶೇಖರನೆ, ನೀನಿಂತು ಮರಳನ್ನಿಕ್ಕಿ
ಗಾಣವಂ ತಿರುಗಿಸಲು ಬಲ್ಲರೇನೆಸ್ಟುವರು?
ಮಂದರೆಯೆನಲ್ಕೆ ರಕ್ಕಸಕುಲದವಳು, ಬಂದಿ
ಯಾದವಳವಳ ನುಡಿಗೆ ಕಿವಿಗೊಡುವರಾರಿಹರು?
ಮೇಣಿದ್ದರೂ ರಾಜಕಾರ್ಯದೊಳವಳ್ಗೆ ಕೈ
ಯೆಲ್ಲಿಹುದು? ತಾನಿರುವುದಾದರೂ [illegible]ಣಿಸುವ
ಪೋಣಿಸುವ ಕಾಣಿಸುವ ಜಾಣ್ಮೆಯೆಂತೊದಗುವುದ
ದಂ ನಂಬಿ, ಮುಗಿಲ ಮನೆಯೊಕ್ಕಲ್ಗೆ ಸನ್ನಾಹ
ವೆಸಗುವುದೆ? ಪೇಳೆನಲ್ನಸುನಗುತ ಮಂತ್ರಿ ಬಿಂ
ದಣ ಸೂತ್ರಕಿನ್ನೊಂದು ಟಿಪ್ಪಣವನೆತ್ತಿದನು:— ೧೬

'ನೆಲದ ಗುಣವನ್ನರಿತು ಕಾಲದಲಿ ನೀತಿಯಂ
ಬಿತ್ತಿ ಬೆಳೆಯಿಸಿ ಪೈರುಗೊಯ್ಯುತೀವರೆಗೆ ನಿನ
ಗೊಪ್ಪಿಸುತ ಮೆಚ್ಚುಗೊಂಡಿದ್ದೀ ಪ್ರಹಸ್ತನಿಂ
ದಿದರೊಳೇನಪಹಸ್ತನಹನೆಂದು ಬಗೆವೆಯಾ?
ಸಂದೇಹವಂತಿರಲಿ; ಕಿರುಕುಳದ ಪಾಮರಿತಿ
ಯೆಂದು ಮಂದರೆಯಲ್ಲಿ ಕವಲುಗೊಳ್ಳದಿರು; ಹೆ
ಣ್ಣಾದರೇನವಳ ಕೈಯೊಂದೆ ಸಾಸಿರ ದಡಿಗ
ರಕ್ಕಸರ ಕೈಗಳಿಂ ಮೇಲದಂತಿರಲಿ; ಸಾ
ಕೇತವನ್ನೊಂದುತಿಂದಿನ ವರೆಗೆ ರಾಣಿಯಂ-
ತರದಲ್ಲಿ ತನ್ನೆಣಿಕೆಯನೆ ಹಾಸುಹೊಕ್ಕಾಗಿ
ಹೊಲಿಯತೊಡಗಿಹಳೊಂದು ನೂಲನಳೆದರೆ ಸಾಕು—
ಕುಸುಕುವಂತಸುಕುವಂತೆಸಕವಂ ಕೂರ್ತಿಹಳು.

ಮರುದಿಬ್ಬಣಂ ಬಂದ ಕೂಡಲೇ ದಶರಥಂ
ರಾಮುಂಗೆ ಪಟ್ಟವಂ ಕಟ್ಟಲೆಣಿಸಿಹನಂತೆ!
ಆ ವೇಳೆಯಲಿ ಹಿಂದೆ ವಲ್ಲಭಂ ಪಾಲಿಸಿದ
ನಿೂಸಲಾಗಿಪ್ಪ ವರವೆರಡರೊಳಗೊಂದರಿಂ
ರಾಮುಂಗೆ ಹದಿನಾಲ್ಕುವರ್ಷ ಪರ್ಯಂತರಂ
ಬನವಾಸವಾಸವಂ ಮೇಣೊಂದರಿಂದೆ ಭರ
ತಂಗೆ ರಾಜ್ಯಾಧಿಕಾರವನೀಯಬೇಕೆಂದು
ಕೈಕೆಯೇ ದಶರಥನೊಡನೆ ಬೇಡುವಂದದಿಂ-
ದೆಲ್ಲವನ್ನಣಿಗಟ್ಟುತಾನೆ ಬಂದಿಪ್ಪೆನೆನೆ,
ಬೆನ್ನಿಗೇಂ ಕಣ್ಣುಂಟೆ—ತಿರುಗಿ ನೋಡಲು ಬೇಕೆ?
ರಾಮನೇಕಾಕಿಯಾಗುತ್ತ ನಮ್ಮಯ ತೆಂಕ
ನಾಡಿಗೆಯ್ತುಹನೊಂದು ಬಿಲ್ಮುರಿದ ಬಲವಲ್ಲಿ
ಸಲ್ಲುವುದೆ? ನೀರುಳಿದು ಮರಳಲಿ ಪೊರಳ್ವಲ್ಲಿ
ಹೆಮ್ಮರದ ಕೊರಡಾಗಿ ಬೀಳದಿಹುದೇ ಮೊಸಳೆ
ಯಂತದಂ ಕಡಿದಿಕ್ಕುವೆವು; ಮೇಲೆ ಕೌಶಿಕನ
ತಂತ್ರುಂ, ವಸಿಷ್ಠನೆಂಬವನ ಮಂತ್ರಂ, ಮತ್ತಿ
ನವರ ಯಂತ್ರವದೆಲ್ಲ ಹೆಣದ ಮೆಯ್ಯಿಂ ವಾತ
ಪಿತ್ತಕಫಗಳವೊಲು ಸಡಿಲ್ದು ಬರಡಾಗುವುವು.
ಕವಲೆಣಿಸದಿರು; ಮನವನತ್ತಿತ್ತ ಹರಿಯಬಿಡ
ದಿರು; ಮೇಲ್ನೆಲಕೆ ಪರಶಿವಂ ದೇವನೆಂತಂತೆ
ಕಿನ್ನೆಲಕೆ ನೀನೊಬ್ಬನೇ ದೇವನೆನಿಪೊಂದು
ಹೂಣಿಕೆಯನಿದೊ ಹೂಡಿಹೆಂ! ಮತ್ತೆ ವಾಲಿಗೀ-
ಲಿಗಳೆಂಬ ಕಣ್ಣಕಸವನ್ನೂದಿ ಹಾರಿಸ
ಲ್ಕೀ ಮಂತ್ರದಂತರಂಗದೊಳುಂಟುಪಾಯವೆ'ಂ
ದಾ ಮಂತ್ರಿಯೆಣಿಕೆಗೊಳಗಾದನಾ ರಕ್ಕಸಂ. ೧೭

ಅವನ ಕಣ್ ಕಂಡ ನೋಟವನದಂ ಕವಿಯಲ್ಲ-
ದನ್ನಿಗರು ಕಾಂಬರೇ? ಕಾಣರಾತನ ಕನಸಿ-

ಸಲಿ ತೆಂಕನಾಡಿಗಡಿಯಿಡುವ ರಾಘವನೊಡನೆ
ಸೀತೆಯೂ ಬಾರದಿಹಳೇ? ಬಹಳು; ಬಂದಳಾ
ಮೇಲೆ ರಾಮಂ ವಿರಾಮುಂಬಡೆಯನೇ? ಪಟ್ಟ
ನಾಮೇಲೆ ಮುನಿಗಳಂ ಗೆರಸೆಯಂತಟ್ಟ ಹಾ
ರಿಸದಿಹೆನೆ? ಹಾರಿಸಿದೆನಾ ಮೇಲೆ ಸೀತೆಯಂ
ಪಿಡಿಯದೇಂ ಬಿಡುವೆನೇ? ಬಿಡೆನೆನುತ್ತೊಂದರಿಂ
ಮೇಲೊಂದು ಮಂಡಿಗೆಯನುಂಡುಂಡು ಮನದಣಿದು
ತೇಗುತಂ ಸವಿಯನೇನೊಂದನೂ ಸೊಲ್ಲಿಸದೆ
ಮಂದಹಾಸಂಬೀರಿ ಮಂತ್ರಿಯಂ ಕೊಂಡಾಡಿ
ದನು; ಮತ್ತೆ ಮರುದಿಬ್ಬಣದ ಬರವನಂತೆ ಭಾ
ರ್ಗವನ ಗೆಯ್ಮೆಯನರಿಯಬೇಕೆಂದು ಪುಷ್ಪಕವ
ನೇರುತ್ತಲಿಬ್ಬರೂ ಬಾಂದಳದ ಬೆಳ್ಮುಗಿಲ
ಮರೆಗೊಂಡು ಗುರಿವಿಡಿದು ಹರಿದರಾಯೆಡೆಯಿಂದ. ೧೮

---

## ಹತ್ತನೆಯ ಖಂಡ

ತಮ್ಮಂತರಂಗಂಗಳೇ ಬೇರೆ ಬೇರೆ ಬಹಿ
ರಂಗಂಗಳಂ ತಾಳುತವತರಿಸಿದಂದದಿಂ-
ದೊಪ್ಪುತಿಹ ರಾಮಾದಿ ಸುಕುಮಾರಕರಿಗಲ್ಲಿ
ತರವಿಡಿದು ಸೀತಾದ್ಯರನ್ನು ಕೈವಿಡಿಯಿಸುತ
ಜನಕ ದಶರಥರೊಂದಿದಾನಂದವನ್ನೊರೆಯು
ತಿಂತೆಂದು ತೋರಿಸುವ ನಿಕಷವಂ ನಾನರಿಯೆ-
ನಂತಾ ವಿವಾಹಸಂಭ್ರಮನೆಲ್ಲವೂ ಮುಗಿಯೆ,
ಮರುದಿಬ್ಬಣಕ್ಕೆ ನಾಯಕನಾಗಿ ದಶರಥಂ
ಸುಮುಹೂರ್ತವನ್ನರಿತು ಹೊರಟನಾನಂದದಿಂ. ೧

ಸಡಗರಂ ಗುಡಿಗಟ್ಟುತರಸಿಯರು ತಂತಮ್ಮ
ಕುವರಿಯರನನುಸರಿಸುತಂಗಣವನೊಂದಿದರು.
ಕನ್ನಿಕೆಯರಿಗೆ ಬುದ್ಧಿವೇಳ್ವ, ತಮ್ಮನುಭವಂ
ಗಳ ಸಾರವಂ ಕಿವಿಯೊಳೆರೆದೂಡಿಸುತ್ತಿಪ್ಪ,
'ಮರೆಯದಿಹುದಿಂತಿದಂ ಕಡೆಗಣಿಸಬೇಡದ-
ನ್ನಾ ನುಡಿಯ ಸೆರಗಿನಲಿ ಗಂಟಿಕ್ಕು; ಬಾಯ್ದೆರೆಯು
ವಲ್ಲಿಂತು ನೆನಪಿರಲಿ; ಕೆಯ್ಯೆದೆಯೊಳನುಗೊಳಲಿ;
ಮರವೆಯಿಂದಂತಾದುದಿಂತಾದುದೆಂದು ಬಗೆ
ಕುರುಡಾಗಿ ಪರಡದಿಹುದೆ'ಂದಿಂತು ಮೊದಲಾಗಿ
ಬೀಳದಿಹ ಚೆನ್ನೆಯಾದೆಚ್ಚರೆದೆಯಕ್ಕರಂ
ಗಳನು ಕೂಸುಗಳಿಗೊರೆವಲ್ಲಿ, ಮುಂದೈದುತಿ
ಪ್ಪಳಿಯುಂದಿರೋರೊಂದು ನಸುನಗೆಯುಗುಳ್ವ ಕಡೆ
ಗಣ್ಣತ್ತಲೊಲೆದು ಬಗೆಪೊಕ್ಕು ಮರುಕದ ಕುದಿಯೊ
ಳೊಂದಲದೆ ಮಾಪುರ್ಗೊಂಡುದು; ಲಜ್ಜೆಯಾ ರಸಾ
ಯನವಾಗಿ ತುಂಬಿತುಳುಕುತ ಸೂಸಿತೆಂಬಂತೆ

ಸುರಿವ ಕಣ್ಣೀರನೊಂದಿನಿಸು ನಗೆವೆರಸುತ್ತ
ಸೆರಗಿಂದಲೊರಸುತ್ತ ಮೆಲುಮೆಲ್ಲನಡಿಯಿಡು
ತ್ತಿಹ ರಾಣಿಯರ ವಂಗಡಂ ಹಿಂದೆ ರಾಜಿಸಿತು! ೨

ಜನಕಾದಿಗಳು ಮುಂದೆ ದಶರಥನ ಬಳಿವಿಡಿದು
ನಲ್ನುಡಿಯ ಬಳೆಯಿಸುತ, ರಾಜಧರ್ಮ-ಸಮಾಜ
ಧರ್ಮಗಳ ಸಾರವಂ ಹಿಂಬಾಲಿಪಳಿಯಂದಿ
ರಂತರಂ ಮೆಯ್ಗೊಳ್ಳಲೆಂಬೆಣಿಕೆಯಿಂದಲೋ-
ಕುಳಿಯನಾಡುತ ನಡೆಯುತಿರಲು ಮುರುದಿಬ್ಬಣದ
ನಾಯಕಂ ದಶರಥಂ ಹಿಂದಿರುಗಿ ನೋಳ್ಪಲ್ಲಿ,
ಅರಮನೆವಿಡಿದು ಜನರ ಜಂಗುಳಿಯು ಮೊನಲು ಹರಿ
ತರುತಲಿರೆ ಬೆರಗಾಗುತುಚಿತವಚನಗಳಿಂದ
ಲಣೆಗಟ್ಟತಕ್ಕುದೆಂಬೆಣಿಕೆಯಿಂ ಕೌಶಿಕವ-
ಸಿಷ್ಠರನ್ನೀಕ್ಷಿಸಲ್ಕವರೊಳಗೆ ಗಾಧಿಜಂ
ಜನಕನ ಮೊಗಂ ನೋಡಿ ಮುಗುಳುನಗೆಯಂ ಬೀರಿ
ನುಡಿಯನೆತ್ತಲ್ಕೆಲ್ಲರೂ ನಿಂದು ಕೇಳ್ಪಲ್ಲಿ
ನಿಂದರಂ ನಿಲಿಸಿ ಮುನಿವಚನವಂ ತಡೆದೊಂದು
ಸಿಂಹನಾದಂ ಬಾನೆಡೆಯಲಿ ಹೊಡಕರಿಸಿತ್ತು! ೩

ಅದನಾಲಿಸಿದ ನಾಯಕರ ಮೊಗದೊಳೇ ಬೆಬ್ಬ
ಳದ ಗೆರೆಯನೆಳೆಯುತ್ತ ಬೇವಸವದುಬ್ಬರಿಸ
ತೊಡಗಿತೆಂದಾ ಮೇಲೆ ಮತ್ತಿನವರಂದವೆಂ-
ತಾಗಿದ್ದುದೆಂಬುದಂ ಬಿತ್ತರಿಸಲೇಕಿನ್ನು?
ಬಂಗಿಯುಂಡಂತಾಗಿ ನಿಂದಲ್ಲಿ ನಿಂದು, ನೋ
ಡಿದುದನೇ ನೋಡಿ, ಸಂಕಲೆಯೊಳಾದರ್ಕೆಲರು;
ನಾಲಗೆಯಲುಗಧಾಗಿ, ಕೈಮೊಗಂಗಳ ಸನ್ನೆ
ಸೊನ್ನೆಯೆನ್ನಿಸಿ, ಬೆಗಡುಗೊಂಡವರು ಕೆಲರಿನ್ನು
ಮರುಳಿನಂತಾದವರ ಹುರುಳಾರಿಹೋದವರ

ಕೊಲೆ ಸೋಂಕುವಡೆದವರ ತಲೆಯೊಳಲೆಯೆದ್ದವರ
ಲೆಕ್ಕವಂ ನೆಲಕರುಹಬೇಕೆಂದು ಬಗೆದರೂ
ಕವಿಯದೇಂ ಕಾಯಕಲ್ಪಂಬಡೆದು ತಾನಲ್ಲಿ-
ಗಡಿಯಿಟ್ಟನೇ? ಬಗೆಯೊಳವಲಕ್ಕಿಗುಟ್ಟನೇ! ೪

ಅನಿತರರೊಳಗೀ ನೆಲಂ ಮೂರಿ ಬಿಡುವುದೊ! ಹೇಳೆ
ನುವ ಶಂಕೆಯನ್ನೆದೆಯೊಳಂಕಿಸುವ ಘನಘೋರ
ನಾದವದು ಹತ್ತಿರದೊಳಾದುದವ್ಯಕ್ತಾಕ್ಷ-
ರಂಗಳಾ ಸರದ ಗೊಣಸುಗಳಾದುವವುಗಳೊಳ
ಗಿನಿಸಿನಿಸು ಮಿನುಗುವರ್ಥಂಗಳೂ ಮಿಂಚತೊಡ
ಗಲು, ನಾದವದು ಸಮ್ಮುಖಂಬಿಡಿದು ಬಹುದೆಂಬ
ಹೊಲಬಾಯ್ತು! ಮನದಳತೆಯೂಸರಂ ಕಣ್ಣಳತೆ
ಗೊಂಡ ದಾರಿಯ ಕಟ್ಟಕಡೆಯಂತರಾಳದಿಂ-
ದೆದ್ದೆದ್ದು ತೇಲ್ದು ಬರೆ, ಕೂವೆಗಂಬವದೆನ್ನ
ಲೆತ್ತಿ ಕಟ್ಟಿದ್ದರ್ಧಚಂದ್ರನಾಕಾರದಲ-
ಗಲುಗುತ್ತಿಲಿಹ ಕುಠಾರಂ ಕಣ್ಗೆಕಾಣಿಸಿತು! ೫

ಮಾಸಿತಾ ಭ್ರಮೆ! ಕಟಕ್ಕೆಂದು ಕಡಿದುದು ಸಂಶ
ಯದ ಕವಲು! ಬಗೆಯೊಳಗೆ ಬೆಂಕಿ ಮೊಂಕರಿಸಿದುದು!
ಅದೊ ಬರುತ್ತಿದೆ ಬಂದುದಾ ಕ್ಷತ್ರಕುಲಕಾಳ
ರಾತ್ರಿಯೊತ್ತಿದ ಮುದ್ರೆಯೆನೆ, ಕೊಡಲಿಗೊನೆಯಲುಗು
ತಿಹುದದೋ ಜಡೆಗೂದಲೊಲೆಯುತಿದೆ! ಹಣೆಯಭಸಿ
ತಂ ರಾಜಕುಲವನೆಲ್ಲಂ ಸುಟ್ಟು ಬಾರಿಗೊಂ-
ದೊಂದರಂದದೊಳೆಳೆದ ರೇಖಾತ್ರಯಂಬಡೆದು
ತೋರುತಿದೆ! ರುದ್ರಾಕ್ಷಿ ಸರವೆದೆಯೊಳಲೆಯುತಿದೆ!
ಬಂದನಹುದಹುದಿದೋ ರೇಣುಕಾಸುತನಾವ
ಪಶು ದಾಂಟತೋ! ಹಾವಿನೆಡೆ ಮೊಂಟತೋ! ದಾರಿ
ಗರನಂಟತೋ! ಮಂತ್ರದಿಂ ತಂತ್ರದಿಂ ನೆರವಿ

ಝಂ ಕಾವರಾರೆಂಬ ಗೋಳೊಳಗೊಳಗೆ ಹರಿಯ
ಲಣೆಯಾಗಿ ಭಾರ್ಗವಂ ಜಡಿದು ನಡೆಗಟ್ಟಿದಂ! ೬

ಆ ಹುಬ್ಬಿನೊಲೆತ-ಕಣ್ಣಿನ ಮಲೆತ-ಸುಯ್ಲಿನೇ
ರಿಳಿತಂಗಳನು, ಕೆಯ್ಯನೇರಿದಾ ಕೊಡಲಿಯೊಂ
ದಲೆತವನು, ಕಂಡ ದಶರಥಜನಕರಂತರಂ
ಕುರುಡಾಗಿ ಹೋದುದು! ನಿದಾನವನ್ನರಿಯದಿಹ
ಬೆಜ್ಜರಂದದಲಿ ತಳಮಳಿಸಿದರು! ಭಯದಿಂದ
ಭಕ್ತಿಯಂ ಬೆಳಗಿಸುತ್ತೆರಗಿದರು; ವಿಧ್ಯುಕ್ತ
ವಾಗಿ ಪೂಜಿಸಲೆಂದು ಸನ್ನಾಹವೆಸಗಿದರು! ೭

ಸಾಕು! ಹೋ ಸಾಕು! ಮನ್ನಣೆಗಿನ್ನಣೆಗಳ ಬಿ
ನ್ನಣದ ಬಿಂಗುರುಟಯಾಟಂಗಳನ್ನರಿಯದಿಹ
ಬೆಂಗಿಯೇ? ಪರಶುರಾಮಂ ಕ್ಷತ್ರಿಯಾಧಮಾ
ನ್ವಯಕಾಳರಾಹುವೆಂದೆಂಬುದಂ ಮರೆತಿರೇ?
ಠಕ್ಕುಠೌಳಿಗಳ ಸನ್ನಣದಿಂದ ತಲೆವಾಗು
ತೆನಿತು ಕಾಲಂ ನೀರನೆರೆದಿಂತು ಬೆಳೆಯಿಸಲು
ಬಹುದೆಂದು ಬಗೆದಿಹಿರಿ? ಹೋಗಲಾ ನುಡಿ; ನೆರವಿ
ಯಿದಿರಿನಲಿ ಕೋದಂಡವಂ ಭಂಗಿಸುತ್ತೆನ್ನ
ಪರಮಗುರು ಪರಮೇಶ್ವರಂಗೆ ಮುಖಭಂಗವ
ನ್ನದರೊಡನೆ ಶಿಷ್ಯಂಗೆನಗೆ ಮಾನಭಂಗವ
ನ್ನೆಸಗುತ್ತಲುಬ್ಬರಂಬಿರಿಯುತ್ತಲಿಂತು ಮುರು
ದಿಬ್ಬಣವೆನುವ ನಾಡ ಹಗರಣದ ರಂಗದಲಿ
ರಿಂಗಣಂಗುಣಿಯುತಿಹ ರಾಮನಾವೋನ್ಮತ್ತ
ನಂ ತೋರಲೆನಗರ್ಘ್ಯಪಾದ್ಯಂಗಳಪ್ಪವಾ
ಮದುಮಗಂಗೇನುಚಿತವಂ ಕೊಡಲಿಯೆಂಬಾಸೆ
ಯಿಂದಿದೋ ಕೆಯ್ಯನೆತ್ತಿಹೆನಾತನಂ ಮನ್ನಿ-
ಸಿದ ಮೇಲೆ ನಿಮ್ಮಯ ವಿಚಾರವಂ ಗೆಯ್ವೆನೆ

ಸ್ಮಿತ ಕೆಯ್ಸೆಪರಗೊಂಡ ಭಾರ್ಗವನ ನುಡಿಗೇಳಿ
ಜನಕದಶರಥರ ನಾಲಗೆಯೊಣಗೆ, ಕೌಶಿಕನ
ಕಡೆಗಣ್ಣೊಳಗೆ ಕೆಂಪು ಸೆರೆವರಿಯುತೊಡಗುತಿರೆ,
ಬೆಪ್ಪುವಡೆದಿಪ್ಪ ಹಿರಿಯರ ಮೊಗಂ ಲಕ್ಷ್ಮಣನ
ನೇತ್ರದಿಂ ದುರುದುರಿಪ ಕೆಂಡವಂ ಕಾರಿಸಿತು!
ಕೊರಳಿಂದ ಗರಳವಂತುಳುಕಿಸಿತು! ನೊಂದ ನಾ-
ಗನಂತೆ ಬುಸುಗುಟ್ಟಿ ಮುಂಬರಿದನವನ ಬಾ-
ಯಿಂ ನುಡಿಗಳಲ್ಲ, ನಂಜುರುಳಿಗಳೆ ಚಿಮ್ಮಿದುವು! ೮

'ಬ್ರಾಹ್ಮಣಬ್ರುವ! ಮೊತ್ತಮೊದಲು ಬಾಯಂ ಮುಚ್ಚು!
ಹೈಹಯರ ಯುಗವಿದಲ್ಲೆಂಬುದಂ ಮತ್ತೆಣಿಸು!
ಮುಂದೆ ಸನ್ನಿಧಿವಡೆದರಾರೆಂಬುದಂ ನೋಡು!
ನಿಮಿರಘುಕುಲಂಗಳೊಳಗಾರ್ಯಧರ್ಮಧ್ವಜಂ
ಗಳನೆತ್ತಿದಾ ಜನಕದಶರಥನವಧರಿಸು!
ಅಂತರಿಂ ಮೇಲೀ ಪ್ರಪಂಚಸಂಸ್ಕೃತಿಯೊಂದು
ತಿರುಳಂತೆ, ಕಣ್ಣುಗಳ ಹುರುಳಂತೆ, ಕಂಗೊಳಿಸು-
ವೆನ್ನಣ್ಣನನ್ನಿದೋ ನೋಡಬೇಕೆಂದು ನೀ
ನಾಶಿಸಿದ ರಾಮನಂ—ಸೀತಾಮನಃಕುಮುದ
ಸೋಮನಂ ಕಣ್ದೆರಿಸಿ ಬಿಳ್ಕೊಳನೆ ನಡೆನೋಡು!
ಮೇಣೇನನಾದರೂ ಕೇಳಬೇಕೆಂದಾದ
ರೆನ್ನೊಳೇ ಕೇಳು! ಮುನ್ನುಡಿಯಿಂತು, ಹಿನ್ನುಡಿಯ
ನೆನ್ನುವೆಂ; ನಿನ್ನ ಕತೆಯೆಲ್ಲವಂ ಚಿಕ್ಕಂದಿ-
ನಲ್ಲಿಯೇ ಪಲ್ಗಡಿಯುತೋದುತಿದ್ದೆನು; ನೀನೆ
ಬಂದೀಗ ಪುಣ್ಯದಿಂದೆನ್ನ ಮುಂದಾಗಿಪ್ಪೆ.
ನೀನಲ್ಲವೇ ಹೊತ್ತು ಹೆತ್ತು ಹೊರೆದಬ್ಬೆಯನೆ
ಕಡಿದವಂ? ಕಟುಕರೊಳಗೂ ಕಟುಕನಾದಾತ
ನಾ ಮೇಲೆ ನಾಡ ಹೆಂಗಳ ಬಸಿರು ಬಗಿದ ಪಾ
ತಕನಂತುಟಲ್ಲಲ್ಲಿ ಕೆದರಿಪ್ಪ ತನ್ನ ಗುಣ

ಮಣಿಗಳಂ ಸರಗೊಳಿಸಿ ತೊಡಿಸುವನನರಸುತ್ತ
ಬಂದೆನ್ನ ಮುಂದೆ ನಿಂದಾತನರಿದೆಂ! ಕೇಳು
ಕೇಳೀ ನರೇಂದ್ರರೆಡೆಯಲಿ ಪುರಾಣದ ನಾಲ
ಗೆಯ ನಂಜು ಬಂಜೆಯಾಗದೆ ಮಾಣದಿದೊ ಸಾರಿ
ದೆಂ ಕಡ್ಡಿಮುರಿದೆನೆ'ಂದೆನುತ ಮೂದಲಿಸಿದಂ. ೯

ಅನಿತರಲಿ ಹುಡುಗಾಟವಿಂತೆಡವಿತೇ!—ಎಂದು
ಹಿರಿಯರೆದೆ ಬೆದಬೆದನೆ ಬೇಯುತಿರೆ, ಕಾವಿಂಗೆ
ಸಿಮ್ಮೆಯುದುರಿತ್ತೆನಲು, ಕಣ್ಮುಚ್ಚಲಾರದಾ
ನೋಟವನು ಬಿಡುಗಂಗಳಿಂ ನೋಡುತಿರಲತ್ತ
ಭಾರ್ಗವನ ಕೋಪದಾಟೋಪವನ್ನೇನೆಂದು
ಬಣ್ಣಿಸುವೆನವನಿದಿರೊಳಂದುವರೆಗೆದ್ದು ನಿಂ
ದವರುಂಟೆ! ನಿಂದರೇನಿಂತು ನೀಕರಿಸಿ ನಾ
ಲಗೆ ನೀಡಿದವರುಂಟೆ! ನೀಳ್ಕರಿಸಿ ನೀಡಿದರೆ
ಮತ್ತೆ ಮಿತ್ತುವಿನ ಗಂಟಲ ತಡಂಗುಂಡಿಯಿಂ
ದಿತ್ತ ತಲೆಯನ್ನೆತ್ತಿ ಬಂದರುಂಟೇ! ತಾನ
ದಂತಿರಲ್ಕೀ ರಾಜಪೋತನೀ ಪರಿಯಲ್ಲಿ
ರಂಗವಂ ಪೊಕ್ಕು, ನವನೀತನಾಟಕನಾಂದಿ
ಯನ್ನಾಚರಿಸಲದೀಕ್ಷಿಸುತಲಿದ್ದಾ ಮುನಿಪ
ನೆದೆಯುಂ ಕಲಂಕಿಸಿತು! ಮೊಗದೊಳ್ ಕರಾಳತೆಯ
ನೊದಗಿಸಿತು! ಕೊರಳೊದೆದು ಸಿಡಿವಾರಭಟದ ಕಿಡಿ
ಯೊಡ್ಡಿಂದಲಂತರಿಕ್ಷಂ ಜ್ಯೋತಿರಿಂಗಣನು
ಯಂ ಭಯಂಕರವೆನಿಸಿತಿನ್ನೇನು—ನೆಲಕೆ ಲಯ
ದಚ್ಚೊತ್ತಲಾಯ್ತೆನುತ್ತಳುಕಿ ಬಳುಕಿದ ಜನರ
ಗೊಂದಳಂ ಬೆಬ್ಬಳಿಸಿ ಬೆಂಡಾಗುತಿರುವಲ್ಲಿ, ೧೦

ರೇಣುಕಾನಂದನಂ ಪರಶುವಂ ಜಡಿದನದೊ!
ಹೊಡೆವನಿನ್ನೇನೆಂಬ ಹಾಹಾರವಂಗೇಳಿ

ಲಕ್ಷ್ಮಣಂ ಕಂಗೆಟ್ಟನೇ? ಕೆಡುವನೇ? ಸಿಡಿದ
ನೆತ್ತಿ ಕೋದಂಡವಂ ತಿರುಹಿಡುವನೆಂಬಲ್ಲಿ
ಮಂದಹಾಸಂ ಮಿಸುಗೆ, ಸೀತಾಮನಃಕುಮುದ
ಚಂದ್ರಮಂ ತಾನಿನ್ನು ತಡೆವುದೊಪ್ಪಲ್ಲೆಂದು
ಬಗೆದು, ತಮ್ಮನನತ್ತ ತೊಲಗಿಸುತ ಮುಂಬರಿದು,
ಗುರುವರ್ಯನೇ ರಾಘವಂಗುಚಿತವಿೂ ಕೊಡಲಿ
ಎಂದು ಕೈನೀಡಲ್ಕೆ, ಕೊಳ್ಳದಿಪ್ಪುದು ಶಿಷ್ಯ
ಧರ್ಮವಲ್ಲೆಂದೆಣಿಸಿ, ವಿನಯದಿಂ ಕೊಂಬನೆಂ
ಬಂತೆ ಮೆಲ್ಲನೆ ಸೆಳೆಯೆ, ಬೆರಗಿನುರಿಯಂತರದೊ
ಳವ್ವಳಿಸೆ, ಪರಶುಧರನುರುಬಿ ಪರಿಪರಿಯ ಮಂ-
ತ್ರಾಸ್ತ್ರಂಗಳನ್ನೆತ್ತುತಿರಲೆಲ್ಲವಂತರಂ-
ತರವಾಗುತೊಂದರಿಂ ಮೇಲೊಂದರಂತಾಗಿ
ಶರಗಳೆಲ್ಲವನು ಕೈಯೊಳ್ಕೊಂಡು ದಾಶರಥಿ
ಯರುಹಿದಂ: 'ಮದುಮಗಂಗೀಯೊಸಗೆಯುಡುಗರೆಗ-
ಳೇಂ ಮುಗಿದುವೇ?' ಎಸಲು, ಜಮದಗ್ನಿಯಾತ್ಮಜನ
ವೋರೆ ನೀರೆರೆದ ಬೇಳುರಿಯಾದುದಂತರಂ
ಕರಿಕಾಗಿ ಚುಯ್ಯೆಂಬ ಕೊಂಡವಾದುದು! ಜಲ
ಕ್ಕನದೊಂದೆಣಿಕೆ ಮಿಂಚಿದತ್ತೆದೆಯ ಗುಂಡಿಯಲಿ! ೧೧

'ನಾಡಾಡುವರಸುಮಕ್ಕಳ ವಾಳ್ಕೆಯಲ್ಲವೀ
ನಾಡನಾಡಿಸಲೆನುತ್ತುದಯಿಸಿರುವಾರ್ಯಧ-
ರ್ಮಜ್ಯೋತಿಯೇ ತಾನಿದಾಗಬೇಕಲ್ಲದಿರ
ಲಂತುಟಪ್ಪತ್ತೊಂದು ಬಾರಿಯಾ ಕ್ಷತ್ರಿಯಾ-
ಧಮರ ಕಾಡಂ ಕಡಿದ ಕೊಡಲಿಗೀ ಕುಡುಗೋಲ
ಗತಿಯಹುದೆ! ಬರಿದೆ ಸಂದೇಹಿಸುವೆನೇತಕರಿ
ಮರುಳಿನಂತಿತ್ತಲಲೆವೆನೇಕೋ! ಪರಮ
ಶಿವನ ಕೋದಂಡವಂ ಮುರಿದ ಮಹಿಮಂಗೆನ್ನ
ಪರಶುಗಿರಶುಗಳಾವಲೆಕ್ಕವೆಂದೆಂಬ ದಾ-

ರಿಯೊಳಡಿಯನಿಡದಾದೆನೇ! ರಕ್ಕಸನ ನುಡಿಗೆ
ಕಿವಿಗೊಟ್ಟೆನೇ! ಸಾಕಿರುಳ್ಕಾಣುವಾ ಬಾವಿ
ಯಲಿ ನಡುವಗಲೊಳೆಯ್ದಿ ಬಿದ್ದೆನೀ ನಡವಳಿಗೆ
ಸಾಂಗವೇದಾಧ್ಯಯನವೇಕೆ? ಶಮದಮಸಮಾ
ಧಿಗಳಾಧಿಯೇಕೆ? ಜಡೆಯೇಕೆ? ದಂಡಕಮಂಡ-
ಲಗಳ ಜಂಜಡವೇಕೆನು'ತ್ತಲೆದೆಯೊಳಗೊಳಗೆ
ಮುನ್ನುಂಡ ತಪ್ಪನೇ ಮೆಲುಕಾಡಿಸುತ, ಮೌನ
ದೊಡನತ್ತ ರಾಘವನ ಮೊಗದೊಳೇ ಕಣ್ಣಿಡುತ
ಚಿತ್ರಾರ್ಪಿತಪ್ರತಿಮೆಯಾದನಾ ಭಾರ್ಗವಂ. ೧೨

ಮುಗಿಲೆದ್ದ ಮುನಿಪತಿಯ ಮೋರೆ ಮಳೆಸುರಿಯಲಾ
ದುದನರಿತು ರಾಘವಂ ವಿನಯವಿನಮಿತನಾಗಿ
ಕಾಲ್ವಿಡಿಯುತಡಿಯ ರಜವಂ ತಲೆಯೊಳಿಂಬಿಟ್ಟು
ನಗೆಮುಗುಳ ಪರಿಮಳಂಬೀರತೊಡಗಿದನಿಂತು:— ೧೩

'ಮುನಿರಾಯ ಸೈರಿಸೊಂದರಿತರೊಂಬತ್ತನರಿ
ಯದ ತರಳನುದ್ದುರುಟುತನವನೀ ನಿಮ್ಮ ಸ
ನ್ನಿಧಿಯಲ್ಲಿ ತಲೆಯನೆತ್ತಿದನು; ಬಿರುನುಡಿಯಿಂದ
ಲವಗಣಿಸಿದನು; ಮುಚ್ಚುಮರೆಯೇತಕಪರಾಧ
ವಾದುದೈ! ತಮ್ಮನೇನಣ್ಣನೇನಾರಾದ-
ರೇನಲ್ಲದಿಹ ಸಲ್ಲದಿಹ ಕಜ್ಜದಿಂದ ಕುಲ
ಕಾಯ್ತುಲೇ ಕೆಸರದನಲುಂಬುವೆನು; ಮನವಿತ್ತು
ಕಿವಿಗೊಡುತ್ತೊಲವನಿಟ್ಟಾಲಿಪುದು—ಪಾಲಿಪುದು. ೧೪

ತರಳನಿವನಿನ್ನೆಗಂ ಪೂಜ್ಯಪೂಜಾವ್ಯತಿ
ಕ್ರಮವೆಸಗಿದವನಲ್ಲವಿಂದಿಂತುಟೇಕೆ ಮರು
ಳಾದನೋ! ನೆರವಿಯಿದಿರಲಿ ನಿಮ್ಮ ಕಾಲ್ವಿಡಿಯೆ
ಮಣಿದ ಹಿರಿಯರನಂತು ನೀಕರಿಪುದಂ ಕಂಡ

ಕೇಳಿದೀ ಕಿರಿಯನಭಿಮಾನವಣಿಗಡಿದಿಂತು
ಹರಿದು ಹಾವಳಿ ಗೆಯ್ವುದಪರಾಧವಹುದು; ಮ
ನ್ನಿಸುತೆ ಭಾವಿಪುದೆಳವೆಯೆಂದರ್ಜುನಂ ತಾತ
ನನ್ನಾರ್ಯಕುಲಪತಾಕನನಂತು ಪರಿಭವಿಸಿ
ದಂದವನ್ನರಿತು, ಸುಕ್ಷತ್ರಿಯಾತ್ಮಜನಾದ
ನಿನ್ನೆದೆಯೊಳೆದ್ದ ಮುನಿಸೀ ಕೆಯ್ಯೊಳೀ ಬ್ರಹ್ಮ
ಕುಲಕೊಲ್ಲದಿಪ್ಪ ಹಿಂಸಾಪ್ರಪಂಚದ ಚಿತ್ರ
ವನ್ನೆನಿತು ಬಾರಿ ಬರೆಯಿಸಿತೆಂಬುದಂ ಬಗೆಯ
ಬೇಹುದೈ; ಜಪತಪಸ್ಸ್ವಾಧ್ಯಾಯಶಮದಮಾ
ದಿಗಳಿಂದ ತತ್ತ್ವಸಾರವನೆ ತಾನಂಗೆಯ್ಯೆ
ಪಾಲನಾಗಿಸುವ ನಿಮ್ಮಂದಿಗರ ಪಾಡಂತು-
ಟಾಯ್ತೆನಲು, ನಮ್ಮಂದಿಗರ ಮನಂಬಲಿದ ಕುಲ
ದಭಿಮಾನಭೂತವೀತಂಗೇರಿತೇನದ
ಚ್ಚರಿಯೆ? ತನ್ನಂತನ್ಯನೆಂಬಾರ್ಯತತ್ತ್ವ-
ಮೂರ್ತಿಗೆ ಪೇಳಲೇನದೆಂತಾದರೂ ತಪ್ಪು ತ
ಪ್ಪಹುದು—ನೆಪ್ಪಾಗದೆಂದೊಪ್ಪುವೆಂ; ತಪ್ಪಿಂಗೆ
ಬಾಲಶಿಕ್ಷೆಯನೆಸಗಬೇಕಲ್ಲದೀ ವೊಳೆಗೆ
ಕೊಡಲಿಯನ್ನೆತ್ತಲೇನಾರ್ಯಧರ್ಮಂ ಕೆಡದೆ?
ಮುನಿಸಿನಿಂದಂತಕಾರ್ಯಂ ಸಾಗೆ ಬಾಲಂಗೆ
ಬುದ್ಧಿವೇಳಲ್ಕವಸರಂ ನಿನಗೆ ದೊರೆಯದೆಂ-
ದಿಂತಾಗಿಸಿದೆನಲ್ಲದೀ ರಾಮನುದ್ಧುರುಟು
ತನವನರಳಿಸಿದನಲ್ಲೆ'ಂದೆನುತ್ತೆರಗಿದನು. ೧೫

ಸವಿಗೆ ಸವಿಯೆನಿಪ ಮೆಲ್ಪಿಂಗೆ ಮೆಲ್ಪಾದ ರಾ
ಘವನ ಮೊಗದಿಂದೊಗೆದ ಮಾತನಾಲಿಸಿ, ಮುನಿಯ
ಬಗೆ ಶಾಂತವಾಗತೊಡಗಿತ್ತಾದರೂ ಹರಧ
ನುರ್ಭಂಗವಂತರಂಗವನಂತೆ ನೆರವಿಯಿದಿ
ರೊಳಗಾದ ಸೋಲವದು ಬಹಿರಂಗವಂ ಪಿಡಿದು

ನೇಣಾಗಿ ಬಲಿದು, ನಾಣಾಗಿ ಬಾಗಿಸಲು, ತಲೆ
ಯೆತ್ತಲಾರದನಾಗಿ, ನೆಲದಲ್ಲಿ ನೆಟ್ಟ ಕ
ಣ್ಣುಗ್ಗತ್ತಿ ನಿಂದಾ ಪರಶುಧರನವಸ್ಥಾಂತರವ
ನರಿತು, ರಘುರಾಮನೆದೆಗರಗಿದನು; ಮರುಗಿದನು;
ಮೆಲ್ಲಮೆಲ್ಲನೆ ಸಾಂತ್ವನದ ಮಾತನೆತ್ತಿದನು:— ೧೭

'ಗುರುಗಳಗ್ಗಳ! ಲಾಲಿಸಾ ಧನುರ್ಭಂಗವೀ
ಕರದೋಷದಿಂದೆ ಸಮನಿಸಿದಲ್ಲಿ ಬೇಸರಂ-
ಬಡೆದು ಪಾಪಕ್ಕೆ ಮನೆಯಾದೆನೇ! ಎನ್ನುತ ಸ-
ಕಳಿದೆನದನೀಕ್ಷಿಸುತ್ತೀ ಕೌಶಿಕನೆ ಬೋಧಿ
ಸಿದ ತತ್ತ್ವಸಾರದಿಂದೆಚ್ಚತ್ತೆನೆಂದದ
ನ್ನೆಲ್ಲವಂ ಬಿತ್ತರಿಸುತೆಂದಂ ಗುರುತ್ರಯದ
ಸನ್ನಿಧಾನಂ ಗೂಡಿದಿಲ್ಲಿ ಹಿಂದಾದ ನಿ
ರ್ಧಾರದೊಳಗಿನಿತನಿತು ಕುಂದಿರಲ್ಕೊಡಗೂಡು-
ತಿದನಿತ್ಥಮೆನ್ನುತ ನಿರೂಪಿಸಲ್ಕದರಂತೆ
ನಡೆವೆನೆಂಬುದರೊಳುಗುರೆಡೆಯ ಸಂಶಯವಿಲ್ಲ
ವೆ'ಂದೆರಗಿದಂ, ಮುನಿಯ ದಂದುಗಂ ಬಯಲಾಗೆ. ೧೭

ಕುರುಡಂಗೆ ಕಣ್ಣಾಯ್ತು! ರೇಣುಕಾಸುತನ ಮುಖ
ಮಂಡಲಂ ಕಳೆದುಂಬಿದುದು! ಸೋತೆನೆಂಬ ದು
ಮ್ಮಾನದೊಕ್ಕಲು ಪೋದುದೆರಗಿದಾ ರಾಮನ
ನ್ನೆತ್ತುತೊಲವಿಂ ಮೆದುಳ ಸಾರವಂ ಹೀರುವಂ-
ತಾಘ್ರಾಣಿಸಲ್ಕಲೌಕಿಕವೆನಿಸುತಾನನದ
ತೇಜವೇರುತ್ತ ಪೋದುದು! ಕೆಲಕ್ಕೊಲೆದು ನಸು
ನಗುತೆ ನೋಳ್ಪಲ್ಲಿ, ನಾಚಿಕೆಯೊಂದು ಮರಿಯಾಗಿ
'ಗುರುವರ ಶತಾಪರಾಧಂ ಕ್ಷಮಸ್ವ' ಎನುತ್ತ
ಮಣಿದ ಲಕ್ಷ್ಮಣನ ತಲೆಯಂ ತಡವಿ, ತಕ್ಕಯ್ಸಿ,
ಪರಶುರಾಮಂ ನುಡಿದನಾದರದ ಸಾರವೆನೆ:— ೧೮

'ನೀನೆಸಗಿದಪರಾಧವೆನ್ನನೀ ಗುರುಪದವಿ
ಗೇರಿಸಿತು! ಶಿಷ್ಯನಿಂದಂ ಪರಾಜಯಮನಿ
ಚ್ಛಿಸಬೇಕೆನುವ ನುಡಿಯ ಸಾರವಂ ಸವಿಯಿಸಿತು.
ಅದರಿಂದ ನಿನ್ನಂತುಟಪರಾಧವೆಸಗುವಾ
ಶಿಷ್ಯನಂ ಪಡೆದು ಗುರುವಾದ ಸಂತಸವನೇ
ನೇನ್ನುವೆಂ! ಕೈಕಸಾತ್ಮಜನ ಪಿಸುಣಾಟಕಾಂ
ಮರುಳಾದೆನೆಂಬುದನುಚಿತವಂತು ಮರುಳಾಗ
ದಿರಲಿಂತು ಹುರುಳನೂಡಿಸಿದ ನಿನ್ನಣ್ಣನಂ
ಧರ್ಮಾಗ್ರ್ರಗಣ್ಯನನ್ನೀ ರಾಮನಂ ಕಾಂಬ,
ಕಂಡು ಜೀವನಸಾರವಂ ಸವಿವ ಪುಣ್ಯವೇಂ
ಸಮನಿಸುತ್ತಿತ್ತೇ? ಮಸಂದೆರೆವೆನಾಲಿಪುದು;
ನಿಮ್ಮನೀ ನೆಲಕೆ ಸೂರ್ಯಾಚಂದ್ರಮಸರೆನಿಸು-
ವಳಿಯುಂದಿರಂ ಮಕ್ಕಳಂ ಪಡೆದು, ಲೋಕದಂ-
ತರವನೂ ಕಾಂತಿಮಯವಾಗಿಸುವ ಸತ್ಕವಿಗ
ಳೆನಿಸುವೀ ಜನಕದಶರಥರಲ್ಲವೇ ತಾಪ-
ಸಾಗ್ರಣಿಗಳರಿಯದಾಂ ಕಡೆಗಣಿಸಿದಪರಾಧ
ವಂ ಮನ್ನಿಸುವುದೆಂಬ ಮಾತು ಮುನಿಪತಿಯ ಮೊಗ
ದಿಂ ನೆಗೆವುದಕ್ಕೆ ಮುನ್ನಂ ತನ್ನ ಕಾಲ್ಗೆರಗಿ-
ದರಸರಂ ಪಿಡಿದೆತ್ತಿ ಮನ್ನಿಸುತ, 'ಹಿಂದುಮುಂ
ದಾದ ಮಾಗಿಯ ಮೇಣು ಬೇಸಗೆಯು ಕಾಟಕಳು
ಕದ ನಿಮ್ಮ ತಪದಿಂದ ನಮ್ಮಾರ್ಯಧರ್ಮಕ್ಕೆ
ಸುಗ್ಗಿಯೊದಗಿತ್ತು! ನಂದನಸಂಪದಂ ಫಲಿಸಿ
ತಿನ್ನಿಳೆಯನಾ ಸುಧರ್ಮಾವಾಸವಂಗೆಯ್ಯು
ತಾನಂದದಲಿ ಬಾಳಿರೆ'ಂದು ತನ್ನಯ ತಪ-
ಶ್ಶಕ್ತಿಯಂ ಶ್ರೀರಾಮಮೂರ್ತಿಯೊಳಗಾವಾಹ
ನಂ ಮಾಳ್ಪವೋಲು ಗಾಢಾಲಿಂಗನಂ ಗೆಯ್ದು,
'ರಾಘವಾ ಮನಕೆ ಮನವೇ ಸಾಕ್ಷಿಯಾಗಿರಲು
ನುಡಿನಡೆಗಳುಪಚಾರವೇಕೆ? ರಾವಣನ ಪಿಸು-

ಣೆಗೆ ಸಿಲುಕಿದೆನ್ನ ಮಾನಸವನಾ ಸೆರೆಯಿಂದ
ಬಿಡಿಸಿ ಗುರುವಾಗಿ ರಕ್ಷಿಸಿದೆ! ನಿನ್ನನ್ನಾವ
ಬಗೆಯಿಂದ ಹರಸುವೆನೊ! ಪೋ, ಮುತ್ತುಮುಪ್ಪಿನೊಂ-
ದೆದೆಯುಪ್ಪಿ ನುಡಿಯೊಪ್ಪಿ ಬಯಸುವೆಂ, ನಿನ್ನೆಣಿಕೆ
ಮಾತುಮಾಳ್ಕೆಗಳಲ್ಲಿ, ಹೆಚ್ಚೇಕೆ—ಜೀವನದೊ
ಳೆಲ್ಲ ಭದ್ರಂ ಶುಭಂ ಮಂಗಳಂ ಸಮನಿಸಲಿ!' ೧೯

ಎಂದು ಹರಸುತ್ತುತ್ತಲೊಲವಿಂದ ಕೌಶಿಕನ
ಮೊಗನೋಡಿ, ನಿನ್ನ ಬಗೆ ನೆಲೆಗೊಳುಗೆ, ಧರ್ಮಕ್ಕೆ
ಕಳೆಯೇರುಗೆನಲವಂ ನಸುನಗುತೆ, ಬಾಂದಳದೆ
ಕಣ್ಣಿಟ್ಟದೋ ರಾವಣಂ ಪುಷ್ಪಕದೆ ನಮ್ಮ
ನಾಟಕವನೀಕ್ಷಿಸುತ ವಿರಸಮಾನಸನಾಗಿ
ತಿರುಗುತಿಹನೆಂದರುಹೆ, ನೆರವಿಯೆಲ್ಲಂ ನೋಡ
ಲಾ ಪಾರು ಪಾರಿದುದು—ಮಾಯವಾದುದು! 'ಸತ್ಯ
ಮೇವ ಜಯತೇ ನಾನೃತ'ಮೆನುತ್ತ ನಸುನಗುತ
ಶಾಂತಭಾವಂ ಬಡೆದ ಭಾರ್ಗವಂ ತಿರುಗಿದಂ.
ಬಿರುಗಾಳಿ ಬೀಸೆ, ಗುಡುಗುಡಿಸಿ ಮಿಂಚಪ್ಪಳಿಸೆ,
ಮುಗಿಲು ಮಳೆಸುರಿದು ನೆಲವಂ ತಣಿಯಿಸುವುದಲ್ತೆ! ೨೦

---

# ಹನ್ನೊಂದನೆಯ ಖಂಡ

ನಾರುದಿಬ್ಬಣದ ಕದಿರು ಬಂದು ಮನೆದುಂಬಿದುದು,
ಸಂತಸದ ಮೇಲೆ ಸಂತಸದೊಸಗೆಯಾಡಿದುದು!
ರಾಯವಾಡವನೋಲಗಿಸುವ ಸಿರಿ ನಾಡುನಾ
ಡುಗಳನಾನಂದದಲಿ ಮುಳುಗಿಸಿತು—ಮೂಡಿಸಿತು!
ಅಲ್ಲೋಲಕಲ್ಲೋಲದೊಳಗೊಂದು ತೆರೆಯಾಗಿ
ದಶರಥನ ಬಗೆ ತೆರೆದುದಾಂ ಮುತ್ತಮುದುಕನಾ
ದೆಂ; ರಾಮಚಂದ್ರಂಗುಪಾಯತ್ರಯಂಬಡೆದು
ನೆಲೆಗೊಂಡ ಸಾಮಸನ್ನಿಭನಿಗೀ ನಾಡಿನಾ
ಳ್ಕೆಯನಿತ್ತು, ಪಟ್ಟವಂ ವಿರಚಿಸುತ್ತಾನತ್ತ
ಸರಿವವಧಿ ಕೈಗೂಡಿತೆಂದೆಣಿಪೆನಿನ್ನೆಗಂ
ಕುಲದ ಮಾನದೆ ಧರ್ಮವನ್ನಳೆದು ನೆಲಕಿತ್ತು
ಪಾಲಿಸಿದೆನೆಂತೊ ನಂಬಿದ ದೈವದೊಲವಿಂದ-
ಗುರುಗಳಾಸರೆಯಿಂದ ಹಿರಿಯರಕ್ಕರೆಯಿಂದ
ಲಿನ್ನಿದೋ ದೂರವಾಗುತ್ತಲಿದೆ ನಾಡು, ಹ
ತ್ತಿರವಾಗುತಿದೆಕಾಡು; ಜರೆನರೆಗಳೆಂಬ ಪರಿ
ವಾರಂಗಳೊಡನೆ ಮೆಯ್ಯಲಿ ಮುಪ್ಪು ಠಾಣಯಂ
ಗೊಂಡುದಾ ಹಗೆಯುರುಬೆಗಳ್ಕುತ್ತ ಮೆಯ್ಯುಕ್ಕು
ಮಣ್ಣುಹಿಡಿಯುತ್ತ ಸಡಿಲುತ್ತಿಪ್ಪುದಂ ಗಣಿಸ
ದಿದ್ದರೀ ಜೀವನಂ ಪಲ್ಲಿಲದ ಜೀವನಂ
ತಾನಾಗದಿಪ್ಪುದೇ? ಸಲ್ಲದದು ಹೊಲ್ಲದೆಂ
ದೆನುತ ನಿರ್ಧರಿಸಿದಂ; ಮತ್ತೆ ತನ್ನೆಣಿಕೆಯ
ನ್ನಾರ್ಯಂಗೆ—ಗುರುವಸಿಷ್ಠಂಗೆ ಬಿನ್ನಯಿಸಿಸುತವ
ನೊಪ್ಪುಗೊಂಡಂ. ರಾಮಚಂದ್ರಂಗೆ ಪಟ್ಟಾಭಿ
ಷೇಕವೆಂಬಾ ವಾರ್ತೆ ಪಸರಿಸಲ್ತೊಡಗಿತ್ತು.

ದೊರೆಯ ಬಗೆಗಾಚಾರ್ಯನೆದೆಯಚ್ಚನೊತ್ತಿದೊಡ-
ನದು ರಾಜಭವನದಲಿ ಮಾರಾಣಿಯರ ಮಾಡ
ದಲಿ ತುಂಬಿತುಳುಕಿತ್ತು; ಪರಿವಾರದೆದೆಯೋಳಿ
ಗಳಲಿ ಹರಿದೂರೊಳೆತ್ತೆತ್ತಲೂ ಹೊನಲಾಯ್ತು.
ಅರಮನೆಯೊಳೇನುತ್ಸವದ ಸಮಾರಂಭ ಸ
ನ್ನಾಹಕ್ಕೆ ತಡೆಯುಂಟೆ? ರಾಯನೆಣಿಕೆಯೆ ರೂಪು
ವಡೆದೆಲ್ಲವೂ ಸಿದ್ಧವಾಗುತಿರುವಷ್ಟರಲಿ,
ಮುಂದಿನ್ನು ರಾಮಚಂದ್ರಂಗಾಗಲಿಹ ಧರಾ
ಪಟ್ಟವೆನ್ನುವ ನಾಡಿನೆದೆರಾಗವೆಲ್ಲವನು
ಹೀರಿ, ತಾಂ ತಡೆಯಲಾರದೆ, ಕೊಂಡು ಮುಳುಗಿ ತಣಿ
ಯುವೆನೆಂದು ಮುತ್ತಮುದುನೇಸರಾ ಪಡುಗಡ
ಲ್ಗಿಳಿಯುತ್ತಲಿದ್ದನೆಂಬಲ್ಲಿಗದೊ ಮುಚ್ಚಂಜೆ
ಸವನಿಸಿತ್ತಾ ಸಂಜೆಯ್ಘನು ಗುಳುಂಕಿಸಿತು ಕ
ತ್ತಲೆಯದರ ತಲೆವಿಡಿದು ಕೈಗಳಿಂದಳುಕಿಸುತ
ಪೆರೆ ಮೂಡಿದಂ—ನೆಲಕ್ಕೆರೆದನಾನಂದವಂ. ೨

ಆ ಸಮಯದಲಿ ರಾಘವಂ ತನ್ನಣುಗದಮ್ಮ-
ನೊಡನರಸುಮನೆಯ ಮುಖಮಂಡಪದೊಳೋಲಗಂ-
ಗೊಂಡಿರಲ್ಕತ್ತಲೋವರಿಯೊಳೂರ್ಮಿಳೆಯ ನ
ಲ್ನುಡಿಯಲ್ಲಿ ಕಿವಿಯೊಂದುಗೂಡಿ, ವೀಣಾನಾದ
ದಲಿ ಬೆರೆದ ಹಾಡಾಗಿ, ಸೀತೆಯಿಪ್ಪವಸರದೊ
ಳದೊ ಮಿೂರಿತಿರುಳೆಂದು ರಾಘವಂ ತಮ್ಮನೊಡ-
ನೇಳ್ವ ಸಮಯಕ್ಕೆ ಸರಿಯಾಗಿ, ಸಚಿವಂ ಸುಮಂ
ತ್ರಂ ಬಂದನೊಳವೊಕ್ಕನೊಡನೆ ಸೋದರರಿಬ್ಬ
ರೂ ಭಕ್ತಿಭರದಿಂದೆ ಪಿತೃಸನ್ನಿಭನ ಸನಿಹ
ಕೆಯ್ದಿ, ತಲೆವಾಗಿದರು; ಕರೆತಂದು ಗದ್ದುಗೆಯ
ನೇರಿಸಿದರೇನಿಂತಕಾಲದಲ್ಲೊಬ್ಬನೇ
ಬಂದಿಹುದು? ಮೋರೆಯೊಳಗವ್ಯಕ್ತರೂಪದಿಂ

ಬರವೆ ನೆಲೆವಡೆದಂತೆ ತೋರುವುದಿದೇನಾರ್ಯ
ಧರ್ಮವನ್ನುಂಡದರ ಸಾರವೇ ಮೆಯ್ಯಾಗಿ,
ರಾಯಂಗೆ ಕೆಯ್ಯ ಕನ್ನಡಿಯಾಗಿ, ಲೋಕವಂ
ನಡೆಯಿಸುವ ಗುರುವರನೆ, ನಿನ್ನ ಮಂತ್ರಾರ್ಥವೆಂ-
ದೆನಿಪ ತಂತ್ರದೊಳಾವ ರಾಜ್ಯಯಂತ್ರಂ ನಡೆಯು
ದೋ ಪೇಳುಪೇಳ್ವುದೀ ಮೆಯ್ಯನೇ ಕೀಲ್ಗೊಳಿಸಿ
ನಡೆಯಿಸಲು ರಾಮನಂ ಕೈಗೊಳ್ಳಬೇಕೆನು
ತ್ತೆರಗಿದಂ ಭಕ್ತಿಭರಿತಾಂತರಂ ಸಚಿವಂಗೆ. ೩

ನುಡಿಯಾಲಿಸಿದ ವೃದ್ಧಮಂತ್ರಿಯ ಮೊಗಂ ಬೇವ
ಸದ ಬೂದಿಯನ್ನೂದಿದಂತಾಯ್ತು; ಕಣ್ಣಸೆರೆ
ಗಳ ಕೆಂಗೆರೆಗಳೊಂದು ಚಿತ್ರವಂ ಬರೆದುವಾ
ಕೊರಳ ನರವುಬ್ಬಿದುದು! ಮತ್ತೆ 'ರಾಮಾ!' ಎನ್ನು
ವೆರಡಕ್ಕರಂ ಹರಿದುದಲ್ಲದಾ ಮೇಲೆ ತಲೆ
ಯೆತ್ತುವಕ್ಷರಗಳೊಳಗೊಂದನಿನ್ನೊಂದು ಹಿಂ
ದೆಳೆಯುತವುಕುತ್ತಲೊಳಗೊಳಗೆ ಹೋರಾಡುವಂ-
ತಾದುದಲ್ಲದೆ ಮುನ್ನುಡಿಯಲಾರದಾ ಸಚಿವ-
ನಂದವಂ ಕಾಣುತರಮನೆಯೊಳೇನೋ ಹೊಲ್ಲ
ದವಗಡಕ್ಕೆಡೆಯಾಗಿರಲು ಬೇಕೆನುತ್ತ ಲ
ಕ್ಷ್ಮಣನಂತರಂಗದೊಳೆ ಕೊರಗುತಿರೆ, ಸೀತಾನ
ಯನಚಂದ್ರನಾ ಮಂತ್ರಿವರನೊಳಿಂತಾಡಿದಂ:— ೪

'ಹಿರಿಯರಗ್ಗಳ! ನಿನ್ನ ನೆಡುವಗೆಯನಿಂತುಟಳ
ಲೇಕಲುಗಿಸಿತ್ತೊ, ನಾನರಿಯೆನ್ನೆ! ಸುಖದಂತೆ
ದುಃಖವೂ ಜೀವನಕ್ಕಧಿಕಾರಿಯೆಂಬುದ-
ನ್ನರಿತು ಮೈಮರೆಯಬಹುದೇ? ಬಾರದದರಿಂದ
ರಾಜಕಾರ್ಯಂ ಸೂತ್ರವಳಿದ ಜವನಿಕೆಯಪ್ಪ-
ದಲ್ಲವೆ? ಪರಾಂಬರಿಪುದೇನಾದರೂ ಪೌರು-

ಷಜ್ಯೋತಿಯೊಂದೆ ನಂದಾದೀಪವಾಗಿ ರಾ
ಜಕದೆದೆಯ ಗುಡಿಯೊಳಗೆ ಬೆಳಗುತಿಹುದೇ ರಾಜ
ಧರ್ಮವೆಂಬುದನು ನೀನೇ ಬೋಧಿಸಿಹೆಯಲ್ತೆ?
ತಾಟಕಾದಿಗಳನನುಸರಿಪಣ್ಣರಾರಾದ
ರೂ ಕಣ್ಣ ತೆರೆದಿಹರೆ? ಹಿರಿಯಂಗೆ ಕೈವಿಡಿರಿ-
ದಾಪದಂ ಪದವಿಟ್ಟಹುದೆ? ಪೇಳ್ವುದೆಂತಾದ
ರೇಂ ನಿದಾನವನರಿತಮೇಲೆ ರೋಗಕ್ಕಂಜ
ಲೆಡೆಯಿಲ್ಲವಾರ್ಯಕುಲದೊಳು ಪುಟ್ಟುತಿನ್ನಶಾ-
ಶ್ವತಗಳಹ ಸುಖದುಃಖಗಳಿಗೆ ಬಗೆಯಲುಗುವುದೆ?
ಪೋ, ನಾಳೆ ನೆತ್ತಿಗೇರಲ್ಕಿಹ ಕಿರೀಟವ
ಪೊನ್ನಾದರೂ ತೃಣವೆಂದು ಬಗೆದು, ರಾಮಂ ಲೋಕ
ವಂ ರಂಜಿಸಲ್ಕೆ ಕೈನೀಡುವಂ; ಬೆರಗುಬೇ-
ನೆಗಳ ಬೇಸರವೇಕೆ? ಪರಿಪರಿಯ ಸವಿಗಳೊಡ
ಗೂಡಿಯೇ ಸಂಸಾರಸಾರವೆಂದೆನಿಸಿಪ್ಪ
ಧರ್ಮವದು—ಕರ್ತವ್ಯಕರ್ಮವದು; ಜವನಿಕೆಯ
ನೆತ್ತಿ ತೋರುವುದದೇನೆ'ಂದೆನಲು, ಮಂತ್ರಿಕುಲ
ಶೇಖರಂ ಬಗೆಯನುರೆ ಬಲಿದಿಂತುಟಾಡಿದನು. ೫

'ರಾಮ! ಲೋಕಾಭಿರಾಮಾ! ಪೇಳಲೇನಯ್ಯ-
ನಾಳಿಕೆಯ, ನಳನಳಿಸಿ ಬೆಳೆದ ಬಾಳುವೆಯು, ನಂ
ದನವಿಂದು ಕಾಡುರಿಯ ಬೇಗೆಯಿಂ ಕರಿಮುರಿಕ
ನಾಗತೊಡಗಿಹುದೆಂದು ತೋರುತಿದೆ! ನಾಳೆ ನಿ
ನ್ನಯ ತಲೆಯೊಳೀ ನಾಡಿನೊಡೆತನದ ಭಾರವನು
ಹೊರಿಸಿ ಹಂಗನ್ನುಳಿದು ಪರಮಾರ್ಥಸಾಧನೆಗೆ
ಕೈನೀಡಲೆಂದು ಹವಣಿಸಿದಯ್ಯನೆಣಿಕೆಯ
ನೀನರಿವೆಯಲ್ತೆ? ಬಗೆಯರಿತ ನಾಡವರೆದೆಯೊ-
ಳಾನಂದದೊಸಗೆ ನಲಿದಾಡುತಿರೆ, ಹೊಲದ ತುರು-
ವಿಂಡಿಂಗೆ ಸೋವರಿತು ಸಾರುತೆಡೆಗೊಂಡು ಕಾ

ಲವನೀಕ್ಷಿಸುತ್ತಿರುವ ಹೆಬ್ಬುಲಿಯವೋಲು ನೆರೆ
ದವಗಡವದೊಂದು ಬಾಯ್ದೆರೆದು ಹಾರಿತ್ತಯ್ಯ!
ಆವಗಡದ ಹೊಲಬಾವುದೆಂಬುದನ್ನವಧರಿಪು
ದಿತ್ತ ಹಿಂದೊಮ್ಮೆ ನೀವಣುಗರೆಲ್ಲರು ಪುರುಷ
ರೂಪದಿಂ ನೆಲಕಿಳಿಯದಂದು, ಪೌರುಷಸಾರ
ವೆನಿಸಿ ತಂದೆಯ ಮೆಯ್ಯನುಕ್ಕಿಸುತ್ತಿದ್ದಂದು,
ದೇವವರ್ಗಕ್ಕುಪಟಳಂಗೆಯ್ಯುತಿದ್ದ ಬಲಿ
ಶಂಬರರೆನುವ ದಾನವರನಣಗಿಸಲ್ಕೆಂದು
ಸುರಪತಿಯ ಬೆಸದಿಂದ ತಾತನೆಯ್ದಿದನು; ಹೋ
ರಾಟವದು ಮಸೆಯೆ, ಮಾಯಾವಿ ಶಂಬರನುರಿದ-
ನುಕ್ಕಿದಂ! ಚಾರಿವರಿದೆಚ್ಚಾಡುವಲ್ಲಿ ಸಾ
ರಥಿ ಮಡಿಯೆ, ರಥದ ಕೀಲುಡಿಯೆ, ತಾತನ ಕೆಯ್ಮೆ
ಸೆಡೆಯೆ, ಕಂಡಾ ಸಂದುಗಟ್ಟನೊಳೊಡಂಬೆರೆದು
ಪೋದ ನಿನ್ನಯ ಕಿರಿಯ ತಾಯಿ—ಪ್ರತ್ಯುತ್ಪನ್ನ
ಮತಿಯೆನಿಪ ಕೈಕೇಯಿ ತನ್ನ ಕಿರುಬೆರಳನೇ
ಕೀಲ್ಗೊಳಿಸಿದಳು; ಪೇಳಲೇಂ! ರಥವನಂತುಟಾ
ಕಾಲವನು ತಾನವುಗಳಿಂ ಬೆರೆದ ವಲ್ಲಭನ
ಮೈಮೆಯನ್ನೂ ಸಂದುಗಟ್ಟಿದಳು! ರಕ್ಕಸರ
ನಟ್ಟದಂ! ಮೆಟ್ಟಿದಂ! ದಶರಥನ ಕೋಲ ಕೋ-
ಳ್ಗಸಕಳಿದ ಹಗೆಗಳೆಲ್ಲರು ಭೂತಕಾಲಕಾ-
ಹುತಿಯರಾದರಯ್ಯಂಗೆ ಗೆಲ್ಲವೆಣ್ ಮಾಲೆಯ
ನ್ನಿಕ್ಕಿದಳೆನಲ್ಕಿಂದ್ರನೆಯ್ತಂದನಾಗಳೇ
ಚಿಕ್ಕಮ್ಮನಳವು ಬಯಲಾಯ್ತು! ದೇವೇಂದ್ರನ-
ಚ್ಚರಿಯ ಕೈಗೂಸಾದನರಸನಾನಂದಸೂ
ತ್ರದ ಬೊಂಬೆಯಾದನಾ ನೆರವಿ ಮರುಳೆದ್ದು ಕುಣಿ
ದುದು; ಮತ್ತೆ ಸುರಪತಿಸಮಕ್ಷದೊಳೆ ಕೈಕೇಯಿ
ಗುಡಿದ ತೇರಿಗೆ ಬೆರಳು ಬೆಸೆದುದಕ್ಕೊಂದು ತೇ
ರೆಸಗಿದುದಕೊಂದೆನುತ್ತಯ್ಯಂ ವರಂಗಳೆರ

ಡಂ ನೀಡಿದಂ; ರಾಜದಂಪತಿಗಳಾ ಜಸಂ
ದಾಂಗುಡಿಗೊಳುತ್ತ ದೆಸೆದೆಸೆಗಳಿಗೆ ಪಸರಿಸಿತು. ೬

ನುಡಿಗೇಳಿ ರಾಮೂಂತರಂಗಂ ತರಂಗಕ್ಕೆ
ರಂಗವಾದುದು: 'ಮಂತ್ರಿವೃಂದಾರಕಾ! ಕಿವಿಗೆ
ಹಬ್ಬವೆಂದೆನಿಸುವೆಮ್ಮಯ್ಯನಾಳ್ತನವನೀ
ನೆಲದೊಳಗೆ ವೀರರಮಣಿಯರ ತಲೆವಣಿಯಾದ
ಚಿಕ್ಕಮ್ಮನಳವನಂತೆರಡಂ ನಿರೂಪಿಸುವ
ಸಂದರ್ಭದೊಳಗಿಂತು ಬೇಸರಂ ಸೂಸಲೇಂ
ಕಾರಣಂ? ತಾನಂತು ಪೆಸರಾಂತ ತಾಯ್ತಂದೆ-
ವಿರ ಮಕ್ಕಳಾದೆಮ್ಮ ನಡವಳಿಯೊಳೇಂ ಬಾಲ
ಬುದ್ಧಿಯಿಂದಂ ಕಳಂಕಂ ವೊಳೆದುದಂ ಕಂಡೆ-
ಯಾ? ತಡೆಯದೊಡನೆ ಗುರಿಯಿಟ್ಟು ಬೋಧಿಸಿ ತಿದ್ದ
ಬೇಕೆ'ಂಬ ರಾಘವಂಗೀ ಪರಿಯೊಳರುಹಿದನು:— ೭

'ರಾಯಗುವರರ ತಲೆಯ ಮಣಿಯೆ! ಬೆಳ್ಳುಪ್ಪನೀ
ಕ್ಷಿಸುತ ಸಕ್ಕರೆಯದೆಂದೆಣಿಸದಿರುದಾರತೆಯ
ಮೆಯ್ಯಾದ ವಂಚನೆಯ ಹೊಲಬನೇನೆಂದರಿಯ
ದಯ್ಯನೆದೆದೆರೆದೆಂದ ನುಡಿಗಳನ್ನಾಲಿಸುತ
ಕೈಕೆಯೊರೆದಳು: 'ನಲ್ಲ ವರವನಾಗೀವುದೈ?
ಮೆಯ್ಯೊಂದು ಸುಯ್ಯೊಂದು ಬಾಳೊಂದೆನಿಸಿ ನಿನ್ನೊ
ಳೊಂದಾಗಿ ಬಾಳ್ವ ನಾನೆಂತಿದಂ ಕೈಗೊಂಬೆ
ನಿದು ಬಲ್ಲವರ ಬಗೆಗೆ ಪರಿಹಾಸವಂತೆನ್ನ
ಮನಕೆ ಬೇಸರವನೊಡ್ಡುವುದೆ'ನಲ್ಕರಸನಾ
ನಂದತುಂದಿಲನಾಗುತಂತೆಣಿಸಬೇಡ, ರಘು
ಕುಲದರಸನೆತ್ತಿದೆದೆನುಡಿಗೈಗಳಂ ಬರಡು
ಗೊಳಿಸಲ್ಕೆ ಹವಣಿಸಲು ಬಾರದೆನಲೊತ್ತಾಯ-
ಕೊಳಗಾಗಿ, ಬೇಕಾದ ಕಾಲದೊಳು ತಾಂ ಕೇಳ್ದು

ಪಡೆವೆನೆಂದಾ ನಾರಿಯಾಗಿದ್ದ ಕಾಲದ
ಲ್ಲೆದೆಯೊಳಗೆ ಮೀಸಲಾಗಿಟ್ಟ ವರಗಳನೀಗ
ಮಾರಿಯಾಗುತ್ತಲುಗುಳಿದಳದನ್ನಾಲಿಪುದು! ೮

ರಾಘವಂ ಹದಿನಾಲ್ಕು ವರ್ಷಂಗಳನ್ನೆಗಂ
ವನವಾಸದೊಳಗಲೆಯಬೇಕು; ತನ್ನಣುಗಂಗೆ—
ಭರತಂಗೆ ಪಟ್ಟಾಭಿಷೇಕವನ್ನೆಸಗಬೇ
ಕೆಂದಂತರಂಗಪೇಟಿಕೆಯಿಂದ ಹೆಡೆಯನೆ
ತ್ತಿದಳು! ನಂಜಿನ ಹಲ್ಗಳೆರಡು ನಾಂಟಿತ್ತರಸ
ನಂ ಕೂಡೆ ಹಾಯೆಂದು ದಿಗ್ಭ್ರಮೆಯನಾಂತು ಹಾ-
ಸಿಗೆಗುರುಳ್ದಂ! ಮತ್ತೆ ಮಾತಿಲ್ಲದಾದನಂ-
ಗೋಪಾಂಗವೆಲ್ಲ ಪರವಶವಾಗಿಹುದು! ಮೊಗದೊ
ಳವಲಕ್ಷಣದ ರೇಖೆ ಹೊಳೆಯತೊಡಗುತ್ತಲಿದೆ!
ಸುಯ್ಯೊಂದೆ ಮೇಲೇರುತಿಳಿಯುತಾನಿಹೆನೆಂಬು
ದಂ ನಿರೂಪಿಸುತಿಹುದು! ನಿನ್ನಬ್ಬೆ ಮೈಮರೆತು
ಬಿದ್ದಿಹಳು! ಕೈಕೇಯಿಯಿಂತಿದೆನ್ನಂ ವಂಚಿ
ಸುವ ಮಾಟವೆನುತಲುರಿವಳು! ಸುಮಿತ್ರಾದೇವಿ
ಯೊಬ್ಬಳೇ ಧೈರ್ಯವಾಂತೆನ್ನಂ ಕರೆದು, ರಾಘ
ವಂಗೊರೆಯುತೊಡಗೊಂಡು ಬಾ, ಎಂದು ಕಳುಹಿದಳು! ೯

ಪರಿವಾರದೊಳಗಾರಿಗೂ ತಿಳಿಯದಿಹ ಗೂಢ
ತಂತ್ರವಿದು ರಾಜಾಲಯಾಂತರದಿ ಗುಣುಗುಟ್ಟು
ತಿದೆ ಮಗನೆ! ನಿನ್ನ ಚಿಕ್ಕಮ್ಮನಂ ನೀಕರಿಪ
ನೀ ಮುದುಪನೆಂದು ಬೇಸರಿಸಬೇಡಂದಿನಿಂ-
ದಿಂದಿನ ವರೆಗೆ ನಿಮ್ಮ ತಾತನೊಡನುಂಡಾಡಿ
ಬಳೆದು ಕಲಿತಿಳಿಯೊಳಗೆ ನೀತಿವಿದರಗ್ಗಳೆಯ
ನೆಂದೆನಿಸಿ, ನಾಡಾಳ್ಕೆಗಾಶ್ರಯಸ್ತಂಭನಾ
ಗುತ್ತ, ಕನಸೂ ಕಾಣಿಸದ ಸೌಖ್ಯಸಂಪದಂ

ಗಳಿಗೆ ಕಣಿಯಾಗಿ, ನಾಡವರೊಳಾ ಕಣಿಯನಣಿ
ಗೊಳಿಸಿ ಬಾಳುತ, ಕಟ್ಟಕಡೆಗೆ ಮುದುಗಣ್ಣಿಂತು
ಕಾಣಬಾರದ ಕಾಣ್ಕೆಯಂ ಕಂಡು ಮುಚ್ಚಬೇ
ಕಾದ ಭಾಗ್ಯಂ ವಿೂಸಲಾದುದೇ! ಕಾಮಧೇ
ನುವನೆ ಕರೆದಾ ಪಾಲನಿಂತು ಬಚ್ಚಲ ನೀರ-
ನೆರೆದು ಕಾಯಿಸಿ ಕುಡಿಯಬೇಕೆಂಬ ವಿಧಿಯಾಯ್ತೆ!
ಬಲ್ಲವರ ಮಾತು ಹುಸಿಯಲ್ಲ—ದೀರ್ಘಾಯುಷ್ಯ
ವದು ಕೊಲೆಯ ಪುಟಪಾಕದೊಲೆಯೆಂಬರದುವೆ ಮಣಿ
ಯಾದುದಂತಿರಲಿ; ಪುರಜನವಿದನ್ನರಿತರೇ
ನೆಂಬುದೋ! ಬವಣೆಯೇನಪ್ಪುದೋ! ಕಂಗಾಣ
ದಾಗಿರುವೆನೆ'ಂದು ಮಂತ್ರೀಶ್ವರಂ ಮರುಗಿದಂ. ೧೦

ಅದನರಿತು ಕಳವಳಿಸುವೆದೆನೆಲದೊಳತ್ತಿತ್ತ
ಜಾರತೊಡಗಿದ ಮನದ ಹಜ್ಜೆಯಂ ರಾಘವಂ
ಬಲಿಯುತಿರೆ, ಲಕ್ಷ್ಮಣಂ ಬೇನೆಗೊಂಡುರಿ ಸೂಸಿ,
ಹೆಡೆಯೆತ್ತಿ, ಬಾಲದೊಳು ನಿಂದಾ ಭುಜಂಗನಂ-
ತೆದ್ದನಾ ಕೈಕೆಗೀ ಧಾರಿಣಿಯ ಪಟ್ಟದಲಿ
ಕಣ್ಣಾದುದೇ? ತನ್ನ ಮಗನುತ್ತಮಾಂಗದ
ಲ್ಲೀಂ ಕಡಂದುರುತೆಗಳ ಪಟ್ಟಗಟ್ಟಿಸಿಕೊಂಡು
ಕಾಣಬೇಕೆಂಬ ಮನವಾದುದೇ? ಪೋ, ಗಂಡ
ನುಸಿರಿಗೂ ಗಂಡವಾಗಲು ಬಗೆದವಳ ಮೊಗಂ
ಗಾಂಬೆನೆಂಬನಿತರಲಿ ರಾಮಚಂದ್ರಂ ಸಹೋ
ದರನಂದವಂ ನೋಡಿ, ನಸುನಕ್ಕು, ಕೈನಿಡಿಯು
ತೊತ್ತಾಯದಿಂದೆ ಕುಳ್ಳಿರಿಸುತಿಂತುಸುರಿದನು:— ೧೧

'ತಮ್ಮ! ನೀನೇನಿಂತು ಬಾಹ್ಯಾಂಗದಂತರಂ-
ಗದ ಬಲಂ ಬಳೆಯದಿಹ ಸಡಿಲುತಿಹ ಬಾಲವೃ
ದ್ಧರ ಪರಿಯೊಳಲ್ಪವಿಷಯಂ ಮನಂಗುನಿಸೆ ಬಗೆ

ಗುಂದಿ ಕಂಗಳನಾಗುತಿಹೆ—ವಿಕೃತಿಗೊಳಗಪ್ಪೆ?
ಸಂತಸಂ ಬೇಸರಂ ಮುನಿಸು ಮರುಕಂ ಮೊದ
ಲ್ಗೊಂಡೀ ವಿಕಾರಂಗಳೆಲ್ಲವೂ ಹೇಡಿತನ
ವೊಂದನೇ ಬೆರಳೆತ್ತಿ ತೋರುವುದು! ಗಾವಿಲರು
ಮುನಿಸೆನಲು ಬಲ್ಮೆಯೊಳ್ಗುಡಿಯೆಂದು, ಮರುಕವೆಂ
ದೆನಲಶಕ್ತಿಯ ಬಾವುಟವೆನುತ್ತಲೆಂತೆಂತೊ
ಬಂಜೆನುಡಿಯನ್ನಾಡುವರು! ಪರಾಂಬರಿಸಿ ನೋ
ಡರಿಗಳುಪಟಳದೊಡ್ಡು, ಬಲವಂತನೊಳವೊಕ್ಕು
ಬಗೆಯಲ್ಲಿ ಮುನಿಸನಾಗಿಪುದದೇ ಮುನಿಸು; ಬಲ
ಹೀನನೆಡೆಯಲಿ ಮರುಕವೆನಿಸಿ ಮಾರ್ಪಡುವುದೀ
ತೆರದಿಂದೆ ಭಾವವೊಂದೇ ಹೃದಯಸಂಬಂಧ
ಸಂದರ್ಭಭೇದದಿಂ ರೂಪಾಂತರಂಗೊಂಬು
ದದರಿಂದ ಚೈತನ್ಯದಂಕುರವೆನಿಪ ಭಾವ
ವನ್ನಿಂತು ಕೋಪಾದಿ ಶತ್ರುಗಳ ಬಲೆಯಲ್ಲಿ
ತೊಡರಿಸಲ್ಕಾಗದೆಂದೆಂಬುದಂ ನಡೆನೋಡು.
ಹಿಂದಣೆಳವೆಯ ಮಕ್ಕಳಾಟದೊಳಗೇ ನಿನ್ನ
ಬಗೆ ನುಸುಳಿ ದುರುದುಂಬಿಯಾಗದಂತಡ್ಡವಿಸು.
ಬಳವಿಯಲಿ ಬಗೆ ಬಲಿದ ಮೇಲೆ ನೂಲ್ವಿಡಿದಲ್ತೆ
ನಮ್ಮನ್ನರೆಣಿಸಬೇಕಾಡಬೇಕಾಚರಿಸ
ಬೇಕಲ್ಲದಿರೆ, ಜೀವನಂ ಕಲುಷಜೀವನವೆ-
ನಿಸುವಲ್ಲಿ ಸಂದೇಹವಿಲ್ಲ ಭಾವಿಸು. ಪರಶು
ಧರನಲ್ಲಿ ಪೂಜ್ಯನಲ್ಲಂತೆಲ್ಲೆಯಂ ಮೀರು
ತಡಿಯಿಟ್ಟೆ, ಬಳಿಕೀಗ ಪಿತನಿತ್ತ ವರವನೇ
ಬೇಡಿರುವ ತಾಯನುಡಿಯನ್ನಾಲಿಸುತ್ತ ಕಿಂ
ಕಿರಿವೋಗುತಿಪ್ಪೆ, ಸಲ್ಲದುಸಲ್ಲದೈ! ನಮ್ಮ
ಕುಲಕೆ ಶೀಲಕೆ ಹೊಲ್ಲದಿಪ್ಪ ನಡೆಯಣುಗ, ನೀ
ನಾಲಿಸೊಂದೇ ಕಜ್ಜದಿಂ ತಾತನಂ ಸತ್ಯ
ಸಂಧನಂಗೆಯ್ದು, ತಾಯೊಲುಮೆಯಂ ಪಡೆದು, ಹು-

ಟ್ಟಂ ಸಫಲವೆಸಗುವಾ ಪುಣ್ಯವೈತರೆ ನೂಕ
ಬೇಕೆಂದು ಬೋಧಿಸುವೆಯಾ?—ಕವಲನೆಣಿಸದಿರು! ೧೨

ಹಿರಿಯ ಮಗನಾಗಿ ಮಾತಾಪಿತರನುಜ್ಞೆಯನು
ಪರಿಪಾಲಿಸುತ್ತ, ರಕ್ಕಸರ ಕೋಟಲೆಯಿಂದ
ಕೊರಗುತಿಹ ತೆಂಕನಾಡೊಳಗಾರ್ಯಧರ್ಮವನು
ಹಾಸುಹೊಕ್ಕಾಗಿಸಲು ತಾಯ ವರವೆನಲೆನಗೆ
ದೈವದತ್ತಂ ವರವೆನುತ್ತ ಭಾವಿಪೆನಿತ್ತ
ನೋಡು; ನಿವ್ಮೊಳಗೆ ಹಿರಿಯಾತನಲ್ಲವೆ ಭರತ
ನಿಳೆಯಂ ಪೊರೆಯುತಿರಲಿ; ನೀವಿಬ್ಬರವನ ಕಾ
ಲಾಗಿ ಕೈಯಾಗಿ ನಡೆಯಲ್ಕೆ ಹಿಡಿಯಲ್ಕೆ ಮೆ
ಯ್ಯಾದಾತನಾಳ್ಕೆ ಬಾಳ್ಕೆಯ ನಂದನಂ, ಸುಗ್ಗಿ
ಗಾಡುಂಬೊಲಂ ವಲಂ ಸಂದೇಹವಿಲ್ಲಿದಕೆ! ೧೩

ಅಂತಲ್ಲದಿನ್ನೊಂದನೆಣಿಸು; ತಾಯ್ತಂದೆವಿರ
ಬಗೆಯೆಣಿಕೆಯಂ ಗಣಿಸದಧಿಕಾರದಾಸೆಯ
ನ್ನಾಂತು ಮಣಿಪೀಠವನ್ನಡರುತ್ತ ಕೇನೆಯಲಿ
ಕಲ್ಲಿಡುವ ತೆರದಿಂ ಕಿರೀಟವಂ ನೆತ್ತಿಯ
ಲ್ಲಿಟ್ಟನಿತರಿಂದರಸನೆನಿಪೆನೇ? ಬೆಳ್ಪರ
ರ್ಚಿಸಿದ ಕಲ್ಲೆಲ್ಲ ಸಾಲಿಗ್ರಾವವಪ್ಪುದೇ?
ಧರ್ಮಕಾರ್ಯಗಳಿಂದ ರಂಜನೆಯನಾಂತ ನಾ
ಡವರಂತರಂಗಪೀಠವನೇರಿದಾತನೇ
ರಾಜನೆನಿಸುವನಂತದೊಂದು ತಪವೆನಿಸುವುದು.
ನಾಡವರ ನಡವಳಿಯೊಳೊಂದಾಗಿ, ನುಡಿವಳಿಯೊ
ಳೊಳೊಡಗೂಡಿ, ನಾಂ ಮೇಲು ನೀಂ ಕೀಳೆನುವ ಮನದ
ದುರಭಿಮಾನವನಡಗಿಸುತ್ತಾತ್ಮವತ್ಸರ್ವ
ಭೂತಾನಿ ಎಂಬ ವಾಕ್ಯಾರ್ಥತತ್ತ್ವವನರಿತು,
ಬಗೆಯಿಂದ ನುಡಿಯಿಂದ ನಡೆಯಿಂದ ನೆಲಕುಣಿಸ

ಬೇಕದೇ ಸಂಸಾರಸಾರವದೆ ರಾಜ್ಯಾಧಿ
ಕಾರಸಾರಂ. ಬಗೆಯ ಕಣ್ದೆರೆದು ನೋಡಿ ಮುಂ
ಗೋಪವಂ ನೀಗು—ಭರತಂಗೆ ನೆರವಾಗು; ನಾಂ
ತಿರುಗಿ ಬರುವನ್ನೆಗಂ ಪಿತೃದೇವನಂ ಸೇವಿ-
ಸುತ್ತಲಿರು; ಸಂತಸಂಗೊಳಿಸಾರ್ಯಧರ್ಮವಂ
ನೆವ್ಮಿರುವ ರಾಜನೀತಿಯೆ ಮೆಯ್ಯನಾಂತು ಕಂ
ಗೊಳಿಸುವೀ ಮಂತ್ರಿಶೇಖರನೆಣಿಕೆಗನುವಾಗಿ
ನಡೆಯುತಿರು; ನಿನಗೆ ಮೇಲಕ್ಕೆ ಮಂಗಲದೇಳ್ಗೆ!' ೧೪

'ಅಣ್ಣ, ನಿನ್ನೀ ವಾಣಿಯಾವಾಣಿದೇವತೆಯ
ಬಾಯ್ದೆರೆಯೊಳೊಲೆವ ಮುತ್ತಹುದೆಣಿಸಲಾದರೇಂ
ನಿನ್ನ ಸನ್ನಿಧಿಯೊಳೇ ಮುಂಗೋಪಕೆರೆಯಾಗು
ತಲೆಯುವೀ ಲಕ್ಷ್ಮಣನ ಜಾತಕವನಂದಿನಿಂ
ದಿಂದುವರೆಗೋದಿರುವೆಯಲ್ತೆ? ನೀನಲ್ಲದಿ
ನ್ನಾರದಂ ಮೂಗುವಳ್ಳಿಯನೆಳೆದು ನಿಲಿಸಲ್ಕೆ
ಬಲ್ಲರದರಿಂದಲಾ ಕೋಪವಂ ತಡೆವುದೇ
ವ್ರತವೆನಿಸಲಡಿವಿಡಿದು ಬರ್ಪೆನ್ನೈ! ನಿನ್ನನೇ
ಹಿಂಬಾಲಿಸುತ ಶೀಲವಂ ಪಾಲಿಸಲ್ಕಲಿವೆ
ನಾ ಭರತನಿಳೆಯನಾಳಲಿ! ಬಾಲ್ಯದಿಂದೊಡನೆ
ಬಳೆಯುತಾ ರಾಗಕಾ ತಾಳವಾಗಿರುವ ಶ
ತ್ರುಘ್ನನಿಲ್ಲಿರಲಿ! ನಿನ್ನಡಿಯೊಳಾಳಾಗಿ ಬಾ
ಳುವ ಭಾಗ್ಯವಂ ಕರುಣಿಸೆ'ಂದು ಕೈಯೊಡ್ಡಿದಂ. ೧೫

ತಮ್ಮನ ಮೊಗಂ ನೋಡಿ ಮರುಮಾತುಗಾಣದಿಹ
ರಾಘವನ ಮೌನದೊಳವಡೆದ ಹುರುಳನ್ನರಿತು
ಮಾಗಧೀಸಂಭವಂ ಸುಮ್ಮನಿರುತಿರುವಲ್ಲಿ,
ಚಾವಡಿಗೆ ಮಂತ್ರಿಯೈತಂದುದನ್ನಾನೇಲೆ
ಬಲಿದ ನುಡಿಗಟ್ಟುಗಳನೆಲ್ಲವನ್ನಾಲಿಸುತ

ಲಿದ್ದ ವೈದೇಹಿ ಮೆಲ್ಲನೆ ಹೊಸತಿಲಂ ದಾಟ
ಹಿಂದಣಿಂ ಬರುವುದನು ಮಣಿಪೀಠವಂ ನೆಮ್ಮಿ
ನಿಲುವುದನ್ನಿದಿರ ನಿಲುಗನ್ನಡಿಯೊಳೇ ಕಂಡು
ಮೊಗದೊಳಗೆ ಸುರಿವಂತರಂಗಸಾರವದೆನಲು
ನಸುನಗುತಲೇನಿದುತ್ಸಾಹದೊಸರುಕ್ಕಿ ಹರಿ
ಯುತ್ತಲಿದೆ! ನಾಳೆ ಮೂರಾಣಿಯಾಗುವೆನೆಂಬ
ಹೆಮ್ಮೆಯಲ್ಲವಲೇ? ಎನಲು ಸುಮಂತ್ರಂ ತಿರುಗಿ
ನೋಡಿದನು. ಕಾಲ್ಗೆರಗಿದವಳಂ ಮನಂ ಮರುಗು
ತೆತ್ತಿ ಹರಸಿದ ಮಂತ್ರಿಯಂದವನ್ನರಿಯುತೆದೆ
ಗೊಂಡು ನಲ್ಲಂಗೆ ಮರುನುಡಿಗೊಟ್ಟಳೀ ತೆರದಿ:— ೧೬

ನಾಳೆಗೊದಗುವ ಹೆಮ್ಮೆಯೆನಗೆಂತು ಮೀಸಲಾ
ಗುವುದು? ನೀನಾವ ಪರಿಯಿಂದ ಮೂರಾಯನೆಂ
ದೆನಿಪೆಯದಕನುವಾಗಿ ಮೂರಾಣಿಯಪ್ಪೆನದ
ರಿಂದೆನ್ನ ನೆತ್ತಿಯೊಳೆ ಹೆಮ್ಮೆಯಂ ನೆಮ್ಮಿಸದಿ
ರೆಂದ ಸೂತ್ರಾರ್ಥವನ್ನವಧರಿಸಿ ರಾಮನಪ
ವಾದಸೂತ್ರವನೆತ್ತಿ ಹೆಣೆದನೀಪರಿಯಿಂದ:— ೧೭

ಆನೆನ್ನದೆಂಬ ಸಂಕಲೆಗಡಿದು ಬನವಾಸ
ದಲಿ ಬಾಳಲೆಂದು ಹರಿವಾನೆ ಪಿಡಿಗೆಂತು ಸಿಲು
ಕುವುದೆಂಬ ನುಡಿಗೇಳಿ ಸೀತೆಯಾಡಿದಳಾನೆ
ಯುಕ್ಕಿ ಸಂಕಲೆಗಡಿದರೇನಂತರಂಗವನು
ಬಲಿವಿಡಿದ ಪಿಡಿಯನೇಂ ಬಿಡಿಸಲಾಪುದೆ? ತಾನ
ದಂತಿರಲಿ, ಬಗೆದಿರುಳನರಳಿಸುವುದೇತಕೆಂ
ದೆನಲು, ದರಹಸಿತವದನಂ ದಾಶರಥಿ ಸಚಿವ
ನಂ ನೋಡುತಂತರಂದೆರೆದಿಂತುಟಾಡಿದಂ:— ೧೮

'ಮಂತ್ರಿಶೇಖರನೆ! ಮುಂದಟ್ಟಾಯ್ತುಲೇ ಮನ
ಕ್ಕೆಲ್ಲವಿದು ತಪ್ಪಲ್ಲವಂಗಂಗಳನ್ನುಳಿಯ
ಲಂಗಿಯೆಂತಾಗುವೆನಿದಿಂತಪ್ಪುದೆಂದಾಗ
ಳೇ ಬಗೆದೆನದುವೆ ಸಮುಕಟ್ಟದುದು. ಹಿಂದೆ ಬಿ
ಲ್ಲೆತ್ತುವಲ್ಲದು ಮುರಿಯಲಾಂ ಚಿಂತೆಯನ್ನೊಂದೆ,
ಕೌಶಿಕಂ ಬೋಧಿಸಿದ ಮಾತೆ ಮಾಣಿಕವಾದು
ದಾ ನುಡಿಯದಂತಿರಲಿ; ತಾಯ್ತುಂದೆವಿರ ಬಗೆಯ
ಧರ್ಮಕಾರ್ಯಂಗಳನು ಪೂರಯಿಸಲಿದೊ ಪವಿ
ತ್ರಂದಾಳ್ದು ಕಂಕಣಂಗಟ್ಟದೆನು. ನಾಂ ಬರುವ
ವರೆಗೆ ಭರತನನೊಪ್ಪುಗೊಂಡು ನಾಡನ್ನಾಳಿ
ಸುತ್ತಲಾನಿಲ್ಲೆಂಬ ಬೇಸರಂ ಹಿರಿಯರೆದೆ
ಯಲಿ ನಾಡಿನಂತರದಿ ಮೊಳೆಯದಿಹ ಮಾಳ್ಕೆಯಿಂ
ದಾರಯ್ವುದೆ'ಂದು ರಾಘವನೆದ್ದು, ಮಂತ್ರಿ ಮುಂ
ಬರಿಯುತಿರೆ, ಸೀತೋರ್ವಿಳೆಯರನನುಸರಿಸುತ್ತ
ಲಕ್ಷ್ಮಣಂ ಹಿಂಬಾಲಿಸುತ್ತಲಿರೆ, ರಾಜಧಾ
ನಿಗೆ ಸರಿದನಾ ಸೂತ್ರಧಾರನೂ ಬೊಂಬೆಯಾ-
ದನೆನಲ್ಕೆ ನೆಲದ ಜಂಜಡವನೆತ್ತುವುದೇಕೆ? ೧೯

---

# ಹನ್ನೆರಡನೆಯ ಖಂಡ

ಅರಸುವಾಡದೊಳಲ್ಲಿಗಲ್ಲಿ ತಂತಮ್ಮ ಕ
ಜ್ಜದಿ ಮನಂ ಮುಳುಗಿರುವ ಪರಿಜನದ ಕೌತೂಹ
ಲವನೇನನೆನ್ನುವೆಂ! ನಾಳೆ ತಮ್ಮೆಲ್ಲವರ
ಮಾನಸದ ರಾಜಹಂಸಂಗೆ—ರಾಮಂಗೆ ಪ
ಟ್ಟಾಭಿಷೇಕವದಕ್ಕೆ ಸನ್ನಾಹವಂ ಗೆಯ್ವು
ದೆಂದೆನಲು ಸಾಮಾನ್ಯವೇ! ಜನ್ಮದೊಳಗೊಮ್ಮೆ
ಕೈಸಾರಿದಾ ಪುಣ್ಯವಲ್ಲವೇ? ತಾನದೇ
ಕೈಯನಲುಗಿಪುದು; ನಾಲಗೆಯನೋಲಗಿಸುವುದು.
ಮುಂದೊದಗಲಿಹ ರಾಮರಾಜ್ಯವೇ ಮನದ ಮೇಲು
ಕಾಗಿರುವುದೆನೆ, ಕರ್ಮಯೋಗದಲಿ ನಿರತರಾ
ಗಿರಲೆಲ್ಲರಾ ಮಂತ್ರಿಯೊಡನೆಯ್ದುತಿಹ ರಾಘ-
ವಾದ್ಯರಂ ಕಂಡು ನಯವಿನಯವಿನಮಿತರಾದ
ರಲ್ಲದೇನಿಂತಕಾಲದೆ ಬಂದರೆಂಬೆಣಿಕೆ-
ಗೊಳಲಿಲ್ಲವದರೊಳಚ್ಚರಿಯುಂಟೆ? ಮೇಣು ಗೂ
ಢಾದ್ಗೂಢತರವಾಗಿ ರಾಜ್ಯತಂತ್ರಂಗಳೊಳ
ಗಡೆ ನುಸುಳಿದಾ ಪ್ರಹಸ್ತನ ಮನದ ಮಂತ್ರವನು
ತನ್ನೊಂದು ಹದವಡೆದ ಪಾಕವೆಸಗುವ ವಿಧಿಯ
ಕೈಗುಣಂ ನೀತಿನಿಪುಣರ ಕಣ್ಗೆ ಮರೆಯಾಗಿ
ಸುಳಿವುದೆಂದೆನಲು ಸಾಮಾನ್ಯರಾದರ್ಗರಿಯ
ಲಳವಹುದೆ? ತಂತಮ್ಮ ಕಜ್ಜಂಗಳೊಳು ತೊಡರು
ತಿದ್ದರದನೀಕ್ಷಿಸುತ ರಾಘವಾದಿಗಳೆಯ್ದಿ
ಪೊಕ್ಕರೊಳವಂ, ನನ್ನಿಯಂತರಂಬುಗುವಂತೆ. ೧

ಅಂಚೆದುಪ್ಪಳ ಹಾಸುಗೆಯಲಿ ಪವಡಿಸಿದರಸ
ನಿದ್ದನೆಚ್ಚರವ ಕನವರವನೊರಕವನಂತು-
ಟೊಂದುಗೂಡಿಸಿ ಸಮೆದ ನಾಲ್ಕನೆಯವಸ್ಥೆಯಾ

ಸಾರವಂ ಸವಿದು ಬಗೆಗೊಳುತಿಪ್ಪನೆಂದೆನಲು,
ಅಧಿಕಾರದೌಷಧವನರೆದು ಮಸ್ತಕಕೆ ಲೇ
ಪಿಸುವಂತೆ ಕೈಕೇಯಿ ಕೀಳ್ಮೊಗಂಗೊಂಡು ಕುಳಿ
ತಿರೆ, ಮಾಗಧೀದೇವಿಯಾ ಮದ್ದಿನುರಿಯನಾ
ರಿಸುವಂತೆ ನಡುವೆ ಬೀಸಣಿಗೆಯಂ ಬೀಸುತಿರೆ,
ಕೋಸಲಾತ್ಮಜೆ ಕಾಲದೆಸೆ ಹಿಂಡಿಹಿಳಿದತ್ತ
ಬಿಸುಟ ಹಿಪ್ಪೆಯವೋಲು ಮೈಮರೆದು ಕೆಡೆದಿರಲು,
ಪೊಸನೋಟವಂ ಕಂಡ ರಾಘವನ ಬಗೆಯೊಂದು
ತೆರನಾಗದಿಹುದೇ! ಪರಾಂಬರಿಪ ಬಗೆಯೆ ನೋ
ಟಕನಾಗೆ ರಸದೊಳಾವೇಶಗೊಳದಿಹನೆಂತು?
ತಾಯ್ವಿರಡಿಯಂ ಸಿರಿಮುಡಿಯು ಮುಗುಳನೆಸಗಿದಂ;
ತಂದೆಯನ್ನಳ್ಗಿಸಿದ ಹೊಸ ಪರಿಯ ಬೇನೆಯ ನಿ
ದಾನವೇನಾಗಿರಲು ಬಹುದೆಂದು ಕೇಳಿದನು. ೨

ಆ ಮಾತನಾಲಿಸುತ ಕೈಕೇಯಿಯೊರೆದಳೆಲೆ
ರಾಘವಾ! ಬೇನೆಗಿದಕಾವುದೋ ಬಿತ್ತೆಂಬು
ದನ್ನರಿಯೆನಾದರೂ ಮೆಯ್ಯೊಳೀ ಬಂದಣಿಕೆ
ತಲೆದೋರಿದಂದವನ್ನೊರೆವೆನಾಲಿಸಿ ಕೇಳು.
ಹಿತ್ತಹಿಂದಿನ ಕಾಲದೊಳಗೆ ನೀವೆಲ್ಲರೂ
ಕಂದೆರೆದು ನೆಲವಿದಂ ನೋಳ್ಪುದಕ್ಕಂ ಮೊದಲು,
ಬಲಿಶಂಬರರ ದಾನವರ ಕಾಟದಿಂದಿಂದ್ರ-
ನಳವಳಿದು ಬೆಂಡಾಗಿ ಬಳಿಯಟ್ಟೆ, ನಿನ್ನಯ್ಯ
ನೊಡಗೂಡಿ ನಾಂ ಪೋಗೆ, ತೇರು ಬಾಂದಳದಲ್ಲಿ
ಹರಿಯೆ, ತೆರೆ ಮುಸಗಿದಾ ರಕ್ಕಸರ ಸೇನೆ ಜ
ರ್ಜ್ಜರಿತವಾದುದು! ಶಂಬರನ ಕೋಲ್ಗಳಿಂದೆ ಸಾ
ರಥಿ ಮಡಿಯೆ, ರಥದ ಕೀಲುಡಿಯಲೀ ಬೆರಳನೇ
ಕೀಲ್ಗೊಳಿಸಿ ಸಡಿಲದಂತೆಸಗುತೊಕ್ಕೆಯ್ಯೊಳಾ
ಸ್ಯಂದನಂ ಬರಿಯಿಸಿದೆನಯ್ಯನಾ ಕಿರುಕುಳರ

ಬಿತ್ತೆಲ್ಲವಂ ಹುರಿದು ರಣದೇವಿಗೊಂದು ಹೊಸ
ಹಬ್ಬವೆಸಗಿದನಮರರೆಲ್ಲ ಬೆರಗಾಗುತಿರೆ! ೩

ಅನಿತರೊಳಗಿಂದ್ರನೈತಂದಲ್ಲಿ, ತೇರಕೀ
ಲೆನ್ನ ಬೆರಳಾಗಿಹುದನೆಲ್ಲರೂ ಕಂಡಲ್ಲಿ,
ದೇವಾಂಗನೆಯರುಬ್ಬಿ ಪಾಡಿ ಪೊಗಳುತ್ತಲಿರು
ವಲ್ಲಿ, ನಿನ್ನಯ್ಯನಾನಂದದೊಳಗೋಲಾಡಿ
ಬೆರಳಿತ್ತ ಕೈಗೊಂದು ತೇರನೆಸಗಿದ ಕೈಗೆ
ಮೇಣೊಂದೆನುತ್ತೆರಡು ವರವನೀಯುವೆನದಂ
ಬೇಡುಬೇಡೆಂದೆನುತ್ತೊತ್ತಂಬವನ್ನೆಸಗೆ,
ನನ್ನಿಯನ್ನೆಂಬೆನೆನ್ನಣುಗನರಸಾಗಬೇ
ಕೆಂಬ ಕೀಳಾಸೆಯೊದಗಿತ್ತಾದರದನೆಂತು
ಬೇಡುವುದು ಪುತ್ರವತಿಯಾನಲ್ಲದಂದು? ನಾ
ಚಿದೆನು; ಹಿಂಜರಿದೆನೀ ತೆರದಿಂದಲಾಡಿದೆನು.
ಆದೊಡೇಂ ನಿಮ್ಮೊಳೆನ್ನಯ ವರಗಳವು ಖಾಸ
ಲಾಗಿರಲಿ; ಕಾಲದೊಳು ಬೇಡುವೆಂ, ಪಡೆವೆನೆನ
ಲಿಂದ್ರನೊಡನೆಲ್ಲರಾನಂದತುಂದಿಲರಾದ-
ರಯ್ಯನೂ ಸೈಯೆಂದು ಮೈಯುಬ್ಬಿ ಸೊಗವಾಂತ
ನಾ ಸಂದುಗಟ್ಟಂತು ತೊಲಗಿತ್ತು; ಮರೆದತ್ತು! ೪

ಇಂದೀಗಳೀ ಸಂದುಗಟ್ಟು ತಲೆದೋರೆ ಹಿಂ
ದಣ ಕತೆಯದೆಲ್ಲ ಪಲ್ಲವಿಸೆ ವರವಂ ಕೇಳ
ದೊಡೆ ಪಿತನ ಮಾತನಾಂ ಬಂಜೆಯೆಸಗುವೆನು; ಕೇ
ಳ್ದೊಡೆ ಮನಕೆ ಮಂಕನಾಗಿಸುವೆನಂತಲ್ಲದೀ
ಕುಲದ ಮಣಿಸೊಡರಾದ ನಿನ್ನ ಪಟ್ಟಕ್ಕೆಡರ
ನೊಡ್ಡುವೆನೆ? ಛೀ! ಧರ್ಮಕೊಲ್ಲದುದು—ಸಲ್ಲದದು!
ಮನದೊಳಗೆ ಕಟ್ಟಿಟ್ಟ ಮುಡಿಪಾದ ವರವದನು
ಕೇಳದಯ್ಯನ ಮಾತಸರಿತು ಬರಡಾಗಿಸಲು

ಬಗೆಗೊಪ್ಪದುದು, ನನ್ನಿಯಪ್ಪುಗೊಳ್ಳದುದೆಂತು-
ಟೀಯುಭಯಸಂಕಷ್ಟದಿಕ್ಕುಳಿಗೆ ಸಿಲುಕದಿಹು-
ದೆಂದೆಣಿಸಿ ನಿರ್ಣಯಿಸಿ, ರಾಘವಂ ಬನವಾಸ
ದೊಳಗೆ ಹದಿನಾಲ್ಕು ವರುಷಂಗಳನ್ನಂ ಚರಿಸ
ಬೇಕನ್ನೆಗಂ ಭರತನಿಳೆಯ ಪಾಲಿಸಲು ಬೇ
ಕೆಂದೊಂದೆ ವರವನೆರಡಾಗಿ ವಿಂಗಡಿಸಿದೆನು.
ಆನದನ್ನಾರಯ್ದು ಬಿನ್ನಯಿಸಿದೊಡಮೇನು
ಪ್ರಕೃತಿಚಂಚಲನಾದ ತಾತನಾ ನುಡಿಯೆ ಸಿಡಿ
ಲೆಂದು, ಹಾರವನು ಹಾವಾಗಿ ಬೆಕ್ಕಸಗೊಂಡು
ಬೆಗಡಾಗಿಹಂ, ಮನಂಗೆಟ್ಟಪ್ಪನಲ್ಲದೇ
ನುಂ ಪ್ರಾಣಭಯವಿಲ್ಲವೆಂದರಮನೆಯ ಬೆಜ್ಜ
ರಾಡಿಹರದಂತಿರಲಿ; ಸತ್ಯಧರ್ಮಂಗಳೆ
ನ್ನಂ ಪಿಡಿಯುತತ್ತಿತ್ತಲೆಳೆವಲ್ಲಿ ಮಾಳ್ಪುದೇಂ?
ಸ್ವಾರ್ಥವೆಂದೆಂಬ ನಂಜಿಂದಾ ವರಂಗಳ
ನ್ನೆಂಜಲಿಸಿದೆನೆ? ನೀನೆ ಹೇಳಿಲ್ಲಿ ಕರ್ತವ್ಯ
ವಾವುದೆಂಬುದನೆನ್ನ ಬಗೆ ತಪ್ಪಿರಲು ತಿದ್ದು
ವೆನು; ಮಗಂ ನೀನಾದರೇನರಿವೆ ಹಿರಿದಲ್ತೆ? ೫

ಚಿಕ್ಕಮ್ಮನೆಂದ ನುಡಿಗೇಳಿ ಸೀತಾಮನೋ
ವಲ್ಲಭನ ಬಗೆ ತುಂಬಿತೆಲಡು ಕಂಗಳೊಳು ಮಗ-
ಮಗಿಸಿತ್ತು! ತಂದೆಯುಂದವನರಿತು ಮುಮ್ಮಲಿಸಿ
ನೋಡಲೆನ್ನುತ ಬಿಂದುವಾಗಿ ಮೂಡಿದುದಾಲಿ
ಯೊಂದು ಕೈಕೆಯ ಮುಖಾಂಬುಜದ ಮೇಲಿನ್ನೊಂದು
ಮಂತ್ರಿಯಾಸ್ಯದೊಳೂರಿ ನೆಲಸೆ, ನುಡಿಯೆತ್ತಿದನು: — ೬

'ಸಚಿವರಗ್ಗಳನೆ, ನೀನಾಲಿಪುದು; ಮನವನಿ-
ಟ್ಟೇನರಿಕೆಯಾದುದೇ? ತಾಯ ಬಾಯ್ದೆರೆಯಿಂದ-
ಲಳಿಸೊಲ್ಲು ತಾನೆಂದಿಗಾದರೂ ಜಗುಳುವುದೆ?

ಮಾತುಲಭವನಕೈದಿದನುಜರಂ ಬರಿಸಬೇ
ಕಣ್ಣನೇಂ ತಮ್ಮನೇನೆಲ್ಲರೊಂದೇ ಮೂಲ
ಚೈತನ್ಯದಿಂದಾದ ಮೂರ್ತಿಗಳು. ಧರ್ಮದಲಿ
ಕವಲಿಲ್ಲ; ಭರತನಾಳಲಿ ನೆಲವನಾನಿಂದು-
ನಾಳೆಗಳ ದಾರಿಯನು ಕಾಲಪುರುಷಂ ಕಾಲ
ನಿಟ್ಟತಿಕ್ರಮಿಪಲ್ಲಿ ಬಪ್ಪೆನಿದನೆಲ್ಲವ
ನ್ನೆಚ್ಚರಂ ಬಡೆವ ಹಿರಿಯರ ಬಗೆಗೆ ನೋವಾಗ
ದಂತೆನ್ನ ನುಡಿಯೊಳೇ ಬಿನ್ನಯಿಸಬೇಕೆ'ನು
ತ್ತೈರಗುತೇಳ್ವಲ್ಲಿ ಕಣ್ಣೀರೊಸರನಲ್ಲಿಗ-
ಲ್ಲಿಗೆ ಕಣ್ಣೊಳೇ ಹೀರುತಿಹ ಸುಮಿತ್ರೆಗೆ ನಮಿಸಿ
ಹರಕೆಯಂ ಪಡೆಯುತ್ತ, ಕೇಕಯಾತ್ಮಜೆಯಂ ಬ
ಲಂಗೊಳ್ಳುತಿರಲವಳ ಪಕ್ಕದೊಳ್ ನಡೆ ನೋಡು
ತಿದ್ದ ಮಂದರೆ ನಾರುಮುಡಿಗಳನ್ನಣಿಗೊಳಿಸು
ತೀಯಲಾಕೆಯ ವೋರೆಯಂ ಕಂಡು ಬಗೆಗೊಂಡು
ರಾಘವಂ ಕೊಂಡುಟ್ಟು ಚೀನಾಂಬರವನುಳಿದ
ನನಿತರಲಿ ಲಕ್ಷ್ಮಣಂ ಚೀರವನ್ನುಟ್ಟು ಹೆರೆ
ಗಳೆದ ನಾಗರನಾಗೆ, ಸೀತೆ ತೊವಲುಡಿಗೆಗು
ಪ್ಪಸಗಳನ್ನಾಂತು ಪೀತಾಂಬರಾದಿಗಳನಗ
ಲಿಸುವಲ್ಲಿ ಪನಿವ ಕಣ್ ಮಲ್ಲಿಗೆಯ ನೊಗ್ಗೆಯಾ
ಗಲು, ಸುಗ್ಗಿಯನ್ನವುಕುತಿರುವ ಬೇಸಗೆಯೆ ಮಂ
ದರೆಯಾಗಿ ಬಂದುದೋ ಹೇಳೆಂಬ ತೆರನಾದು
ದೆಂಬೆನಿನ್ನೇನಲಿ! ಬಾಲೆಯರು ಭೂಷಣ
ಪ್ರಿಯೆಯರಲ್ತೇ? ತನ್ನ ಹಾರಾದ್ಯಲಂಕಾರ
ಗಳನಗಲಿಸುತ್ತೊಮ್ಮೆ ನೋಡಿದಳು; ಮಮಕಾರ-
ವಂ ಕಡಿದು ಮತ್ತೆ ಕೊಟ್ಟಳು; ಧರ್ಮಸಂಸ್ಕೃತಿಯ
ನಭ್ಯಾಸವೆಸಗುವಂತಾಯ್ತು! ರಾಮಾಂತರಂ-
ಗಂ ಸಂತಸಕ್ಕೆ ಬಾಳ್ಮನೆಯಾಯ್ತು! ಲಕ್ಷ್ಮಣನ
ಮಾನಸದೊಳುರಿಯ ತೆರೆಮಾಲೆಗಳು ತೋರಣಂ

ಗಟ್ಟುತಿದ್ದುವು! ಸೀತೆ ಸರ್ವಂಧರಾತ್ಮಭವೆ
ಯಲ್ಲವೆ?—ಮನಂಬಲಿಯುತೆಲ್ಲವಂ ನೀಡಿದಳು! ೭

ಮತ್ತೆ, ಮಂದರೆ ತನ್ನ ಬೆರಳಂ ಕೊರಳ್ಗೆತ್ತಿ
ತೋರೆ, ಜಾನಕಿ ನುಡಿದಳೆಲೆ ದೂತಿ, ಮುತ್ತಿನೀ
ಮೊಸಲಿನ ಪದಕವನು ಬಿಡಿಸುವಾ ಮೇಣನ್ನಿ
ಗರ್ಗ್ಗೆ ಕೈವರ್ತಿಪಧಿಕಾರವೆನಗಿಲ್ಲೆಂದು
ತಲೆವಾಗೆ, ರಾಘವಂ ತಾನೆ ಕೈನೀಡುತ್ತ-
ಲಿದರೊಳೇಂ ಮುತ್ತೆಂಬ ನಾಮವೆಯನಿತ್ಯತಾ
ಸೂಚಕವೆನಲು, ಮುತ್ತಿನೈದೆದಾಳಿಯನಿದಂ
ಬಿಡಿಪಲ್ಲಿ ಜಂಜಡವಿದೇಕೈದೆತನದೊಂದು
ಬಹಿರಂಗ ಮೂರ್ತಿಯಿದು; ಸೀತಾಂಗನಾಂತರಂ
ಗದ ಮೂರ್ತಿಯನ್ನರಸಿ ಪೂಜಿಪಾ ರಾಮಂಗಿ
ದೇಕೆಂದು ಕುಡುವಲ್ಲಿ ಜಾನಕಿಯ ಮೋರೆ ಕಳೆ
ದುಂಬಿದುದು—ಹೆರೆ ತುಂಬಿತೆಂಬವೋಲಾದತ್ತು! ೮

ಆಗಳ್, ಸುಮಿತ್ರೆಯೆದೆಯುಕ್ಕಿತ್ತು! ಮಗನ ಕೈ
ಯಂ ಪಿಡಿದು ಹೆಮ್ಮಗನ ರಾಘವನ ಕೈಯೊಳಿ
ಟ್ಟಳು—ಕಣ್ಣ ನೀರ ಧಾರೆಯನೆರೆದು ಕೊಟ್ಟಳೆಲೆ
ಬಾಲ! ನಿನ್ನಲಿ ಹುಟ್ಟುವಿಡಿದು ಬೆಂಬಿಡಿದ ಮುಂ
ಗೋಪಮಂ ತೊರೆದಣ್ಣನಂ ತಂದೆಯೆಂದು ಬಗೆ
ದತ್ತಿಗೆಯನೀ ಧರ್ಮದೇವತೆಯನೇ ಮಾತೆ
ಯೆಂದು ಭಾವಿಸು! ಕಾಡಯೋಧ್ಯೆಯಾಗಲಿ ನಿನಗ
ದೆಲ್ಲೆಲ್ಲಿ ತೊಳಲಿ ಬಳಲಿದರೇನು ಬಾಹ್ಯಾಂಗ
ವಂತರಂಗದ ಗುಡಿಯೊಳೀ ಪ್ರಾಣವಲ್ಲಭೆಯ
ನೂರ್ಮಿಳೆಯನರ್ಚಿಸುದಯೋದಯಂಗೊಳ್ಳೈಸಲು, ೯

ತಾಯ ಕಾಲ್ಗೆರಗಿ ಲಕ್ಷ್ಮಣನಸ್ತುವೆಂದು, ಕೆಲ
ದಲಿ ಬಾಗಿ ನಿಂದ ನಲ್ಲೆಯ ಮರಂದದ ಕಂಗ
ಳನ್ನೊರಸಿ, 'ಬಾಲೆ! ಕರಗದಿರು, ಕೊರಗದಿರು; ನಾ
ವಿನ್ನೂ ಕಿರಿಯರು; ಸಂಸ್ಕೃತಿಸಾರವಂ ಹೀರು
ತರಗಿಸುತ ಮೈಗೊಂಬ ಧರ್ಮಸಂಸ್ಕೃತಿಬಲವ
ನೊಂದಬೇಕದಕೆ ಗುರುಸೇವೆಯಂ ಗೈಯಬೇ-
ಕದರಿಂದಲೀ ಗುರುವಿನೊಡನೆ ಬನವಾಸಕ್ಕೈ-
ದುವೆನತ್ತೆಯಾಸರೆಯೆ ನಿನಗೆ ಗುರುಕುಲವಕ್ಕೆ!'
ಎಂಬ ನುಡಿಮರುನುಡಿಗಳವರ ಮುಖಮಂಡಲಂ-
ಗಳೊಳಗನುಭಾವಂಗಳೆನಿಸಿ ತೋರುತ್ತಿರಲು,
ಪೊಸ ನೋಟವದು ರಸದ ಕಣಿಯಾಗಿ ಭಾವಕರ
ಬಗೆಯ ಕಾಲುವೆಯೊಳೊಂದಾಗಿ ಹರಿಯುತ್ತಿತ್ತು! ೧೦

* * *

ರಾಘವಂ ರಾಜಭವನದಿನಿಳಿದನಾ ಸೀತೆ—
ಧರ್ಮದೇವತೆ ಬೆಂಬಿಡಿದಳೆರಡು ಕೈಗಳಲಿ
ಬಿಲ್ಲುಗಳು ಹೆಗಲುಗಳೊಳಕ್ಷಯಾಸ್ತ್ರಂಗಳಿಂ
ತುಂಬಿದ ನಿಷಂಗಗಳು ತೊಡವಾಗೆ, ಲಕ್ಷ್ಮಣಂ
ಹಿರಿಯರಂ ಹಿಂಬಾಲಿಸಿದನು. ಮಂತ್ರೀಶ್ವರಂ
ಸರಯುವಂತರಕೊಡನೆ ತೆರಳಿ ಹಿಂದಿರುಗಿದನು.
ಮಮಕಾರ ಮೊದಲಾದ ಬಂಧನದವೊಲು ಪುರವ
ಸರವಡೆದು ಸುತ್ತಿರುವ ಸರಯುವಿನ ದಡದಲ್ಲಿ,
ಸಜ್ಜುಗೈದೀಕ್ಷಿಸುತ್ತಿರ್ಪಂಬಿಗನ ಗುಹನ
ದೋಣಿಯಂ ಭಕ್ತಿಭಾವಮನೇರುವಂತೇರಿ
ತೆಂಕಣ ತಡಿಯೊಳಿಳಿದರೆಂಬಲ್ಲಿ, ನಸುಬೆಳಕು
ಮೂಡುವಟ್ಟದ ಮೋರೆಯಲಿ ಮೂಡಿ ಪಸರಿಸಿತು. ೧೧

ತಂಗಾಳಿಯಮೃತಸಾರದೊಳೋಳಿಗೊಂಡತ್ತು;
ಗಿಡುಮರಂಗಳು ಬಳ್ಳಿಗುದುರುಗಳು ಚೇತನಂ

ಬಲಿದು ರಿಂಗಣದ ರಂಗಂಬೊಕ್ಕುವಾಗ ಸಂ
ಸಾರವಾರ್ಧಿಯನೊಂದು ಕೇಳೀ ಸರೋವರಂ
ಗೈದಿಳಿದ ರಾಜಹಂಸಂ—ರಾಘವಂ ಸೀತೆ
ಗವನು ತೋರಿಸುತ ತಮ್ಮನ ಮನಂಬುಗುವಂತೆ
ಬಣ್ಣಿಸುವ ವರ್ಣಕವನಾಲಿಸುತ್ತಿದ್ದ ಗುಹ
ನಂತರಂಗದ ಗುಹಾಂಗಣವೆಲ್ಲ ಮಿರುಮಿಂಚು
ತಳ್ಪೊಯ್ದು ತೆರನಾದುದನಿತರಲಿ ಬಾಂದಳದೊ
ಳೊಂದು ನಾದಂ ಕೇಳತೊಡಗಿತ್ತದೇನೆಂದು
ನೋಳ್ಪಲ್ಲಿ, ಗುಹನದೋ ರಾವಣಂ ಪುಷ್ಪಕವಿ
ಮಾನದೊಳು ದಕ್ಷಿಣಾಪಥಕ್ಕೈದುವಂ; ಪೋಗಿ
ಬಪ್ಪೆಲರ ಹೆದ್ದಾರಿಯಿದು; ತೆರಳಿ ಹಲಗಾಲ
ವಾಯ್ತಿನ್ನೆಗಂ ಬಡಗನಾಡೊಳಿದ್ದನದಾವ
ರಾಯಗಜ್ಜದ ಜಂಜಡಂ ಜಡಿಯುತಿದ್ದುದೋ!
ಬಲ್ಲರಾರದನೆಂದು ನುಡಿಯೆ, ರಾಮನ ಮಂದ
ಹಾಸದೊಸರಿನ ಹನಿಗಳಾಗಿ ನುಡಿಯುಕ್ಕಿದುದು! ೧೨

'ಗುಹನೆ ಲಾಲಿಸು; ನೆಲದ ತಲೆಯ ಮೇಲ್ವಾಯ್ವ ಬ
ಲ್ಲಿದರ ಗೊಡವೆಯದೇಕೆ ನಮ್ಮಂತಿರಿರ್ಪ ಬನ
ವಾಸಿಗಳಿಗಾ ಮಾತದಂತಿರಲಿ; ಪೊಳಲಿದಂ
ತೊರೆಯಾಗಿ ತೊರೆಯದಂದದಿ ಸುತ್ತಿದೀ ಸರಯು
ವಂ ಸಕಾಲದೊಳೆ ದಾಂಟಿಸಿ ದಾರಿಯಂ ತೋರ್ದ
ನಿನ್ನ ಕೈಯಾ ಮೂಡಿ ಬಪ್ಪ ನೇಸರಿನ ಕೈ
ಯಕ್ಕೆ! ಮನ್ನಿಸು; ಪೋಗಿ ಬಪ್ಪೆವೆಂಬಾ ನುಡಿಯ-
ನಾಲಿಸಿದ ಗುಹನಂತರಂ ತುಂಬಿದುದು! ಕೊರಳು
ಗದ್ಗದಿಸಿದುದು! ಮಾತು ಬುದ್ಬುದಿಸಿದುದು! 'ಕಾವ
ದೇವ! ಹೊರಲಾರದಿಹ ಹೊರೆಯನೀ ಮಸ್ತಕದೊ
ಳಿಡುವುದೊಪ್ಪಿತವೆ? ನಾನೀ ದೋಣಿಯಿಂದೆ ಮೂ-
ದೇವರಾಗಿಹ ನಿಮ್ಮನೇಂ ದಾಂಟಿಸಿದೆನೆ? ದಾಂ

ಟಸಲಾಪೆನೇ? ಲಾಲಿಸೆನ್ನನೇ ದಾಂಟಿಸುವ
ನಾಟಕದ ನಾಂದಿಯನ್ನಾಚರಿಸಿ ತೋರ್ದನಿಂ-
ತೊಪ್ಪೊ ತಪ್ಪೋ ತಿಳಿಯದಿಹ ಗಾವಿಲನ ಭಕ್ತಿ
ಗೊಲಿದೆಯಾದರೆ, ದೇವ, ನಿನ್ನ ಬರವಂ ನಿರೀ
ಕ್ಷಿಸುತಿಪ್ಪ ಗುಡಿಸಲಂ ಪೊಕ್ಕು, ಗುಡಿಯನ್ನಾಗಿ
ಸುತ, ಪೂಜೆಗೊಂಡುತ್ಸವದ ಮೂರ್ತಿಯಾಗಿ ಜಾ
ತ್ರೆಗೆ ಹೊರಡಬೇಕೆ'ಂದು ಬೇಡಿದಾ ಶರಣನಂ
ಮನ್ನಿಸುತ್ತವನ ಬಗೆಯಂ ಪುನೀತಂ ಮಾಡಿ,
ಸಂತಸಂಗೊಳಿಸಿ, ಮುಂಬರಿದನಾ ರಾಜರ್ಷಿ
ಪುಂಗವಂ, ಚಿತ್ರಕೂಟದ ಕೂಟಕೇರಿದಂ.



## ಈ ಲೇಖಕನ ಇತರ ಗ್ರಂಥಗಳು

| | | |
|---|---|---|
| ಚಂದ್ರಾವಲಿ ವಿಲಾಸ | (ಪ್ರತಿಗಳು ಮುಗಿದಿವೆ) | ೦—೮—೦ |
| ಹಗಲಿರುಳು | ( „ „ ) | ೦—೮—೦ |
| ಸೊಬಗಿನ ಬಳ್ಳಿ | ( „ „ ) | ೦—೮—೦ |
| ಪಶ್ಚಾತ್ತಾಪ | . . . . . | ೦—೧೪—೦ |
| ನಾಡೋಜಪಂಪ | . . . . | ४—೦—೦ |
| ಆದಿಪುರಾಣ ಸಂಗ್ರಹ | . . . | ೧—೦—೦ |
| ಸಮಸ್ತಭಾರತ ಸಾರ | (ಬೇಗನೆ ಪ್ರಕಟವಾಗುವುದು) | ೨—೦—೦ |

ಪ್ರತಿಗಳು ಈ ಕೆಳಗಿನವರಲ್ಲಿ ಸಿಕ್ಕುವುವು:—

(೧) ವ್ಯವಸ್ಥಾಪಕ,
'ಕನ್ನಡ ಸೇವಾ ಸಂಘ'
ಅಮ್ಮೆಂಬಳ,
ಪೋಸ್ಟು ಮಂಜೇಶ್ವರ,
ದಕ್ಷಿಣ ಕನ್ನಡ.

(೨) ಟಿ. ಗೋಪಾಲಕೃಷ್ಣ ಭಟ್ಟ,
C/o ಎಮ್. ಶಾಮ ಭಟ್ಟ, ಬಿ.ಎ., ಎಲ್‌ಎಲ್.ಬಿ.,
ಗಣೇಶರಾವ್ ಲೇನ್,
ಕೊಡಿಯಾಲಬೈಲು,
ಮಂಗಳೂರು.